

ಸಾರಿದೆನೋ ನಾನಿನ್ನ ವೆಂಕಟರನ್ನ ॥ ಪ ॥
ನೀರಜ ನಯನನೆ ನಿರ್ಮಲ ಗುಣಪೂರ್ಣ ॥ ಅ. ಪ. ॥

ಅನಾಥನೋ ನಾನು ಎನಗೆ ಬಂಧುವೊ ನೀನು
ನಿನ್ನವನೆಂದು ನೋಡೋ ನೀನಾಗಿ ದಯಮಾಡೊ –1–

ಎನ್ನ ಕುಂದುಗಳನ್ನು ಎಣಿಸಲಾಗದೊ ದೇವ
ಪನ್ನಗಾಚಲವಾಸ ಕಾಯೋ ನಿರ್ದೋಷ –2–

ದೇಶ ದೇಶದವರ ಪೊರೆದಂತೆ ಪೊರೆಯೆನ್ನ
*ಶೇಷಾಚಲ ಘನ ಶ್ರೀಶ ಶ್ರೀಹಯವದನ –3–

— ಶ್ರೀ ವಾದಿರಾಜರು.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಮಂಗಳವಾರ - ಅಷ್ಟದಳಪಾದ ಪದ್ಮಾರಾಧನೆ

ಉದಯ 3–00 ರಿಂದ 3–30 ಸುಪ್ರಭಾತ
(50/- ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ)
,, 3–30 ರಿಂದ 3–45 ವರೆಗೆ ಶುದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ರೂ 100/- ಟಿಕೆಟ್)
,, 4–30 ರಿಂದ 4–45 ವರೆಗೆ ಓಲಗ ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ರೂ 100/– ಟಿಕೆಟ್) (ಏಕಾಂತ)
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 11–00 ವರೆಗೆ ಸರ್ವದರ್ಶನ
ಮಧ್ಯಾಹ್ನ 11–00 ರಿಂದ 12–00 ವರೆಗೆ ಶುದ್ಧಿ, ಎರಡನೇ ಅರ್ಚನೆ, (ಏಕಾಂತ)
(ಮಂಗಳವಾರಗಳಲ್ಲಿ ಮಧ್ಯಾಹ್ನ 11–15 ರಿಂದ 11–45 ವರೆಗೆ ಅಷ್ಟದಳಪಾದ ಪದ್ಮಾರಾಧನೆ ನಡೆಯುವುದು.)
,, 12–00 ರಿಂದ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ (ರೂ 50/– ಟಿಕೆಟ್)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ಸುಪ್ರಭಾತ (ಏಕಾಂತ)
(ರೂ 50/– ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ.)
,, 3–30 ರಿಂದ 3–45 ವರೆಗೆ ಶುದ್ಧಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/–)
,, 4–30 ರಿಂದ 4–45 ವರೆಗೆ ಓಲಗ ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/–)
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ (ಟಿಕೆಟ್ ರೂ 50/–)

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50 ರೂ ಟಿಕೆಟ್ ಪಡೆದವರಿಗೆ ಮಾತ್ರ ಪ್ರವೇಶ)
,, 3–30 ರಿಂದ 3–45 ವರೆಗೆ ಶುದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/–)
,, 4–30 ರಿಂದ 4–45 ವರೆಗೆ ಓಲಗ, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/–)
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ, 2ನೇ ಅರ್ಚನೆ.
,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ
(ಟಿಕೆಟ್ ರೂ 50/–)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50/– ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ.)
,, 3–30 ರಿಂದ 4–30 ವರೆಗೆ ಸಳ್ಳಿಂಪು ಶುದ್ಧಿ, ಮತ್ತು ನಿತ್ಯಕೈಂಕರ್ಯಗಳು
,, 4–30 ರಿಂದ 6–00 ವರೆಗೆ ಅಭಿಷೇಕ (ಅರ್ಜಿತ)
,, 6–00 ರಿಂದ 7–00 ವರೆಗೆ ಸಮರ್ಪಣೆ
,, 7–00 ರಿಂದ 8–00 ವರೆಗೆ ತೋಮಾಲಸೇವೆ ಮತ್ತು ಅರ್ಚನೆ (ಟಿಕೆಟ್ ರೂ 200/–)
,, 8–00 ರಿಂದ 9–00 ವರೆಗೆ ಗಂಟೆ ಬಲಿ, ಶಾತ್ತುಮೊರೆ
,, 9–00 ರಿಂದ ರಾತ್ರಿ 8–30 ವರೆಗೆ ಸರ್ವದರ್ಶನ
(ಸಂಜೆ 7–00 ರಿಂದ 8–30 ವರೆಗೆ ಸಹಸ್ರ ದೀಪಾಲಂಕಾರ ಸೇವೆ)
ರಾತ್ರಿ 8–30 ರಿಂದ 9–30 ವರೆಗೆ ಶುದ್ಧಿ ಇತ್ಯಾದಿ
,, 9–30 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ
(ಟಿಕೆಟ್ ರೂ 50/–)

---

ಗಮನಿಕೆ :– ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಉಯ್ಯಾಲಸೇವೆ, ವಾಹನ ಸೇವೆಗಳು, ವಸಂತೋತ್ಸವ ಮಧ್ಯಾಹ್ನ 1–00 ರಿಂದ 5–00 ನಡುವೆ ನಡೆಯುತ್ತವೆ.



ಗೌರವ ಸಂಪಾದಕರು :
ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬರಾವು, ಎಂ.ಎ.,

ಉಪಸಂಪಾದಕ :
ಕೆ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



**ಸಂಪುಟ ೧೮] ಏಪ್ರಿಲ್ ೧೯೮೮ [ಸಂಚಿಕೆ ೧೧**

# ವಿಷಯಸೂಚಿ



ಮುಖಚಿತ್ರ : ದಶಭುಜ ನೃಸಿಂಹ—ಚಂದ್ರಗಿರಿ, ಚಿತ್ರ — ಶ್ರೀಉದಯಗಿರಿ.
ಒಳಗಡೆ — ಅನ್ನಮಾಚಾರ್ಯ ವರ್ಧಂತಿ ಚಿತ್ರಗಳು.

# ಸಂಪಾದಕೀಯ

ಆ ಭಗವಂತನ ಪ್ರತಿಯೊಂದು ರೂಪವೂ ವಿಭಿನ್ನವಾಗಿರುತ್ತದೆ. ಎಂತಲೇ ಸಕಲ ಪ್ರಾಣಿಕೋಟಿಯಲ್ಲೂ ವಿಭಿನ್ನ ಪ್ರವೃತ್ತಿಗಳು ಕಂಡು ಬರುತ್ತವೆ. ಇಂತಹ ವಿಭಿನ್ನ ರೂಪಗಳ ಸೃಷ್ಟಿಯಲ್ಲಿ ಹಲವು ರೂಪಗಳು ಭಗವಂತನ ಲೀಲಾವಿಲಾಸಗಳಿಗೆ ಸಾಂಕೇತಿಕ ಸಂದೇಶಗಳಾಗಿ ನಿಲ್ಲುತ್ತವೆ.

ಹಾಗೆಂದೇ ಪ್ರತಿರೂಪವೂ ತನ್ನ ಪ್ರತಿರೂಪವೇ ಆದ ಈ ಸೃಷ್ಟಿಯಲ್ಲಿ ಭಗವಂತನ 24 ರೂಪಗಳು ಅತಿ ಶ್ರೇಷ್ಠವೆಂದೂ ಅವುಗಳಲ್ಲೂ ಮತ್ಸ್ಯ ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ ಬುದ್ಧ ಕಲ್ಕ್ಯವತಾರಗಳು ಶ್ರೇಷ್ಠತಮವೆಂದೂ ವಿಜ್ಞರು ಭಾವಿಸುತ್ತಾರೆ. ಎಂದರೆ ಈ ಅವತಾರ ದಶಕದಲ್ಲಿ ಸಮಾಜಕ್ಕೆ ನೀಡಬಹುದಾದ ವಿಶೇಷ ಸಂದೇಶವಿದೆ. ಎಂಬ ಅಂಶ ಖಚಿತ. ಈ ವಿಧವಾಗಿ ನೋಡಿದಲ್ಲಿ ಈ ವಿಶಾಲ ವಿಶ್ವ ರಚನಾವಿನ್ಯಾಸ ಪ್ರತಿರೂಪಗಳೇ ಈ ದಶಾವತಾರಗಳು ಎನ್ನುವಲ್ಲಿ ಆಶ್ಚರ್ಯವಿಲ್ಲ. ಒಂದು ವಿಧದಲ್ಲಿ ಆಧುನಿಕ ವಿಜ್ಞಾನ ನಿರೂಪಿತವಾದ ಜೀವಜಾಲ ಪ್ರಾದುರ್ಭಾವ ಪ್ರಾಭವಗಳ ರೀತಿಯನ್ನು ಈ ದಶಾವತಾರ ನಿರೂಪಿಸುವುದೆನ್ನಬಹುದು.

ಮತ್ಸ್ಯ ಕೂರ್ಮಾವತಾರಗಳ ಪ್ರಾಣಿಕೋಟಿಯ ಪ್ರಸೂತಿ ಪ್ರಚಲನ ದೆಶೆಗೆ ಸಂಕೇತಗಳಾದರೆ, ಮಿಕ್ಕ ಅವತಾರಾಷ್ಟಕ ಉತ್ತರೋತ್ತರ ಅಭಿವೃದ್ಧಿ ನಿರೂಪಕಗಳು. ನಾಲ್ಕನೆಯದಾದ ನರಸಿಂಹಾವತಾರ ಆಧುನಿಕ ಮಾನವನಿಗೆ ಅತಿಹತ್ತಿರವಾದ ವಿವಿಧ ಸಂದೇಶವಲಯವಾಗಿದೆಯೆನ್ನಿಸುತ್ತದೆ ಮೊದಲೆರಡು ಜಲಚರಗಳಾದರೆ ನಂತರದೆರಡು ವನಚರಗಳಾಗಿವೆ ಪರಿಪುಷ್ಟವಾದ ದ್ವಿಪಾದಿ ಜೀವಾವಿರ್ಭಾವ ಸಂಕೇತ ನೃಸಿಂಹರೂಪ. ಹೃದ್ಗತ ಜೀವ ಕಾರುಣ್ಯ ಧರ್ಮಕ್ಕೆ, ಸಾಮಾಜಿಕ ಕ್ಷೇಮಭಾವಲಯಕ್ಕೆ ಇದು ಸಂಧಿದೆಶೆ. ಮರಣದ ಸ್ವರೂಪವನ್ನು ತಿಳಿಯಲೆಳಸಿದ ಹಿರಣ್ಯಕಶಿಪುವಿನ ನಿವಾರಣೆಗಾಗಿ ಭಯಂಕರವಾಗಿ ತೋರಿದ ನೃಸಿಂಹ, ತಂದೆಯಿಂದಲೇ ನಿತ್ಯಮೃತ್ಯು ಸನ್ನಿಹಿತನಾದ ಪ್ರಹ್ಲಾದನಿಗೆ ಆರ್ದ್ರನಾಗಿ ಕಂಡು ಬರುವುದು ಈ ಎರಡೂ ಧರ್ಮಗಳ ಸಂಕೇತ.

ವಾಮನಾವತಾರದಲ್ಲಿ ಬುದ್ಧಿ ಪರಿಣತಿ ತದ್ವಿಕಾಸ ವಿನ್ಯಾಸಗಳಿಗೆ ಮಿಕ್ಕ ಅವತಾರಗಳು ಸಂಕೇತಗಳಾಗುತ್ತವೆ.

ನೃಸಿಂಹಾವತಾರ ಒಂದು ವಿಧದಲ್ಲಿ ಅರ್ಚಾವಿಧಾನ ಚರಿತ್ರೆಗೇ ಆದಿಯೆನ್ನಿಸುತ್ತದೆ. ಮೊದಲ ಮೂರು ಅವತಾರಗಳಲ್ಲಿ ದೃಶ್ಯಾದೃಶ್ಯ ಪ್ರಾಕೃತಿಕ ತೇಜೋರೂಪ ಶಕ್ತಿಯಾಗಿ ಆರಾಧಿಸಲ್ಪಟ್ಟದ್ದು ಪುರಾಣಗಳಲ್ಲಿ ಕಂಡು ಬಂದರೆ, ನೃಸಿಂಹ ಆವಿರ್ಭಾವ ಆದದ್ದೇ ಸಭಾಭವನದ ಸ್ತಂಭಾಂತರ್ಗತವಾಗಿ, ದನುಜ ಸಂಹಾರ ಮಾಡಿದ್ದು ಹೊಸಿಲನ್ನು ಪೀಠವನ್ನಾಗಿ ಮಾಡಿಕೊಂಡು ವಿವಿಧ ದೇವತೆಗಳು ಸ್ತುತಿಸಿದ್ದೂ ಅಲ್ಲಿದ್ದ ನೃಸಿಂಹ ಮೂರ್ತಿಯನ್ನೇ. ಆಲಯ ಪೀಠ, ಬಿಂಬಸ್ಥಾಪನೆ ಆದಿಯಾದ ಆಗಮಿಕ ಪ್ರಕ್ರಿಯೆಗಳಿಗೆ ಈ ಅವತಾರ ಪ್ರಾತಿಪದಿಕೆಯಾಯಿತೇ ಎನ್ನಿಸುತ್ತದೆ ಇದೇ ರಾಮಾಯಣ ಭಾರತಕಾಲದಲ್ಲಿ ವಿಖ್ಯಾತರೂಪವನ್ನು ಹೊಂದಿರಬಹುದು.

ಭಗವಂತ ಭಕ್ತವತ್ಸಲ. ಆ ಅನಂತರೂಪನು. ರಂಗಧರ್ಮಗಳನ್ನು ನಿರ್ವಹಿಸಲೆಂದು ಬ್ರಹ್ಮ ವಿಷ್ಣು ಶಿವ ಇತ್ಯಾದಿ ನಾಮರೂಪಗಳನ್ನು ಧರಿಸಿ ಆಯಾ ವಿಧಿಗಳನ್ನು ನಿರ್ವಹಿಸುತ್ತಿರುತ್ತಾನೆ. ಯಾವ ರೂಪದಲ್ಲಿ ತನ್ನ ಭಕ್ತ ಯಾವ ಬೇಡಿಕೆಯನ್ನು ಮುಂದಿಟ್ಟರೂ ಅವುಗಳನ್ನು ಅಂತೆಯೇ ತೀರಿಸುವ

ಹಿರಣ್ಯಕಶ್ಯಪನು ತನ್ನ ತಪಃಶಕ್ತಿಯಿಂದ ಪರಮೇಷ್ಠಿಯನ್ನು ಮೆಚ್ಚಿಸಿ, ಸಾವಿಲ್ಲದ ವರ ಸಾಧ್ಯವಿಲ್ಲವೆಂದು ತಿಳಿದು, ಒಳಗೆ, ಹೊರಗೆ, ರಾತ್ರಿ ಹಗಲು, ನೀರು, ನೆಲ, ಆಗಸಗಳಲ್ಲಿ ಎಲ್ಲೂ ತನಗೆ ಸಾವು ಇರಬಾರದೆಂದು ವರ ಪಡೆದ. ಹಾಗೆಂದು ವರಪಡೆವೆ ಎಂದುಕೊಂಡನೇ ಹೊರತು, ಇವುಗಳಿಗೆಲ್ಲ ಅತೀತವಾದ ರೀತಿಯಲ್ಲಿ ತನ್ನ ಕಲ್ಪನೆಗೆ ಸಿಕ್ಕದ ವಿಧದಲ್ಲಿ ಸಾವಿನ ವರವನ್ನು ಪಡೆದೆ ಎಂಬುದು ಆತನನ್ನು ತಟ್ಟಲಿಲ್ಲ. ಮಧು ಕೈಟಭರಂತೆಯೇ ಹಿರಣ್ಯಕಶಿಪು ಸಹ ಮರಣವರವನ್ನೇ ಪಡೆದದ್ದರಿಂದ, ಸರ್ವನಿಯಾಮಕ ಆದ ಪರಮಾತ್ಮ ಭಕ್ತನ ಕೋರಿಕೆಯನ್ನು ಅಕ್ಷರಶಃ ನಿರ್ವಹಿಸಿ ವಿಚಿತ್ರರೂಪದಲ್ಲಿ ವರವನ್ನು ಪೂರೈಸಿದ, ಪ್ರಹ್ಲಾದ ರಕ್ಷಣೆಯೇ ಪರಮಾವಧಿಯೆಂದರೆ ಇದೇ ರೂಪವೇಕೆ? ಹಿರಣ್ಯ ಕಶಿಪುವಿನ ಶಿಕ್ಷಣವೂ ಈ ಅವತಾರ ಪ್ರಯೋಜನವೇ ಎನ್ನಿಸುತ್ತದೆ.

ಎಂತಲೇ–ಸಮೋಹಂ ಸರ್ವಭೂತೇಷು–ಎಂಬವಾಕ್ಯ ಸಾರ್ಥಕವಾಯಿತು. ಹೀಗೆ ಪ್ರತಿ ಪುರಾಣಕಥೆಗೂ ಪ್ರತ್ಯೇಕ ಸಂಕೇತವನ್ನು ಸಂದೇಶವನ್ನು ಕಾಣಬಹುದು.

ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಂ

ಓಂ ಶಾಂತಿ ಶ್ಶಾಂತಿ ಶ್ಶಾಂತಿಃ

# ಪ್ರಪನ್ನ ಗಾಯತ್ರಿ

'ಗಾಯತ್ರಿ' ಎಂಬುದು ಸಾಮಾನ್ಯವಾಗಿ ಪರಿಚಯವಾದ ಪದವಾಗಿದೆ. ಗೈ–ಅಕ್ಷರ ಪ್ರಾರ್ಥನೆಯನ್ನೂ, ತ್ರಿ–ಅಕ್ಷರ ರಕ್ಷಣೆಯನ್ನೂ ಸೂಚಿಸುತ್ತವೆ. ರಕ್ಷಣೆಗಾಗಿ ಪ್ರಾರ್ಥಿಸುವುದೇ ಗಾಯತ್ರಿ ಎಂಬ ಪದದ ಅರ್ಥ. ಬ್ರಹ್ಮಗಾಯತ್ರಿ, ವಿಷ್ಣು ಗಾಯತ್ರಿ ಮತ್ತು ಪ್ರಪನ್ನ ಗಾಯತ್ರಿ ಎಂಬ ಮೂರು ವಿಧಗಳುಂಟು.

ಬ್ರಹ್ಮಗಾಯತ್ರಿಯು ಸರ್ವೇಶ್ವರನು ಬ್ರಹ್ಮನಿಗೆ ಉಪದೇಶಿಸಿದ ಸಾವಿತ್ರಿ ಎಂಬ ಮಂತ್ರ. ಮಂತ್ರದ ಮಹತ್ತ್ವವನ್ನು ವಿಶ್ವಾಮಿತ್ರಮುನಿಗಳು ಬೆಳಕಿಗೆ ತಂದರು. ಇದು ವೇದಪ್ರತಿಪಾದನೆಯರೀತ್ಯ ಈ ಪ್ರಪಂಚದಲ್ಲಿ ರಕ್ಷಣೆಗಾಗಿ ಸೂರ್ಯನ ಪ್ರಾರ್ಥನೆ; ಹಾಗೂ ಆದಿತ್ಯನದ್ವಾರ ಆ ಪರಮಾತ್ಮನ ಉಪಾಸನೆಯೇ ಆಗಿದೆ.

ವಿಷ್ಣುಗಾಯತ್ರಿಯು ಆದಿತ್ಯನಸ್ಥಾನದಲ್ಲಿ ವಿಷ್ಣುವನ್ನು ತಿಳಿಸಿ ನೇರವಾಗಿಯೇ ಇಹಪರಗಳಲ್ಲಿ ರಕ್ಷಣಾರ್ಥವಾಗಿ ವಿಷ್ಣುವಿನ ಪ್ರಾರ್ಥನೆ. ಇದು ನರನಿಗೆ ವಿಷ್ಣುವಿನ ಅಷ್ಟಾಕ್ಷರೀ ಮಂತ್ರದ ಉಪದೇಶ

ಪ್ರಪನ್ನ ಗಾಯತ್ರಿ–ಎಂಬುದು ವಿಶಿಷ್ಟಾದ್ವೈತ ಸಿದ್ಧಾಂತದವರ ಶರಣಾಗತಿ ತತ್ತ್ವವನ್ನು ಪ್ರತಿಪಾದಿಸುವ ರಾಮಾನುಜನೂತ್ತಂದಾದಿ ಎಂಬ ಸುಪ್ರಸಿದ್ಧವಾದ ತಮಿಳು ಪ್ರಬಂಧ. ಇದರಲ್ಲಿ ಉಪಾಸನೆಯ ದೈವಾಂಶ ಪುರುಷರು ವಿಷ್ಣು ಪ್ರಪನ್ನರಾದ ಶ್ರೀರಾಮಾನುಜರು ನಿರಂತರವೂ ಜ್ಞಾನಯುಕ್ತನಾದ ಚೇತನನಿಗೂ ಅದ್ವಿತೀಯನಾದ ಪರಮಾತ್ಮನಿಗೂ ಇರುವ ಸಹಜ ಸಂಬಂಧ ಜ್ಞಾನವನ್ನು ಅರಿತವರೇ ಪ್ರಪನ್ನರು. ಪ್ರಪನ್ನರಾದ ಶ್ರೀ ರಾಮಾನುಜರು ಭಗವದಾಜ್ಞಾರೂಪವಾಗಿ ನಿತ್ಯವಿಭೂತಿಯಲ್ಲಿರುವ ಆದಿಶೇಷನ ಅವತಾರವಾಗಿ ಈ ಲೀಲಾವಿಭೂತಿಯಲ್ಲಿ ಜನಿಸಿದರು.

ತ್ರೇತಾಯುಗದಲ್ಲಿ ವಾಲ್ಮೀಕಿ ಮಹರ್ಷಿಗಳು ವೇದಾರ್ಥವನ್ನು ಪ್ರಕಟಪಡಿಸುವುದಕ್ಕಾಗಿ ಶ್ರೀ ರಾಮಚರಿತಾಮೃತವನ್ನು ಲವಕುಶರಿಗೆ ಉಪದೇಶಿಸಿದರು. ಶ್ರೀರಾಮಚಂದ್ರನು ಲವಕುಶರು ಸುಶ್ರಾವ್ಯವಾಗಿ ಹಾಡಿದ ತನ್ನ ಚರಿತ್ರೆಯನ್ನು ಕೇಳಿ ಅದರ ಸತ್ಯತೆ ಮತ್ತು ಪವಿತ್ರತೆಯನ್ನು ಅಂಗೀಕರಿಸಿದನು. ವೇದಾಂತದ ವ್ಯಾಖ್ಯಾನವಾದ ಇತಿಹಾಸ ಶ್ರೇಷ್ಠ ಶ್ರೀಮದ್ರಾಮಾಯಣವು ಸ್ಥಿರವಾಗಿ ಭೂಲೋಕದಲ್ಲಿ ಜನಸಾಮಾನ್ಯರಿಗೆ ತಿಳಿಯಲು ಪಾರಾಯಣ, ಉಪನ್ಯಾಸಮಾಲೆ, ಕಥಾಸಾರಾಂಶ, ಹರಿಕಥೆ ಇತ್ಯಾದಿ ರೂಪಗಳಲ್ಲಿ ಹೆಚ್ಚು ಬಳಕೆಯಲ್ಲಿದೆ.

ಅಂತೆಯೇ ಪ್ರಪನ್ನಗಾಯತ್ರಿಯನ್ನು ಶ್ರೀರಾಮಾನುಜರ ಕಾಲದಲ್ಲಿಯೇ ಬರೆದು ಅವರಿಗೆ ಅರ್ಪಿಸಿ, ಪ್ರಬಂಧದ ಸತ್ಯಾಂಶವನ್ನು ಸಮ್ಮತಿಸಿದ ನಂತರ ಪ್ರಕಟಿಸಲ್ಪಟ್ಟ ಈ ಶ್ರೀಸೂಕ್ತಿಗೆ ಶ್ರೀವೈಷ್ಣವದೇವಾಲಯಗಳಲ್ಲಿ ಶ್ರೀವೈಷ್ಣವರುಗಳ ತಿರುಮಾಳಿಗೆಗಳಲ್ಲಿ ವಿಶೇಷ ಮಾನ್ಯತೆಯಿಂದ ಅಗ್ರಪೂಜೆ ಸಲ್ಲುತ್ತಾ ಇದೆ. ಈ ಕೃತಿಯನ್ನು ಬರೆದ ಮಹನೀಯರು ತಿರುವರಂಗತ್ತ ಮುದನಾರ್ ಎಂಬ ಭಾಗವತರು. ಇವರ ಮೊದಲ ಹೆಸರು ಪೆರಿಯ ಕೋಯಿಲ್ ನಂಬಿ. ಇವರ ತಂದೆ ಮೂಂಗಿಲ್ ವಂಶಸ್ತರಾದ ಅಣಿಯರಂಗತ್ತ ಮುದನಾರ್ ಎಂಬುವರು. ಇವರು ಶ್ರೀರಂಗದಲ್ಲಿ ರಂಗನಾಥಸ್ವಾಮಿ ದೇವಾಲಯದ ಅಧಿಕಾರಿಯಾಗಿದ್ದುದರಿಂದ ಮಗನಿಗೂ ಈ ವೃತ್ತಿಯು ಪರಂಪರೆಯಾಗಿ ಲಭಿಸಿತ್ತು

ಯಾಮುನಾಚಾರ್ಯರು ಪರಮಪದವನ್ನು ಸೇರಿದ ನಂತರ ಅವರ ಶಿಷ್ಯರುಗಳ ಅಭೀಷ್ಟದಂತೆ ಶ್ರೀ ರಾಮಾನುಜಾಚಾರ್ಯರು ಶ್ರೀಪೀಠದ ಮುಖ್ಯಸ್ಥರಾದರು. ಆಗ ಪೆರಿಯನಂಬಿಯವರ ಪರಿಚಯವಾಯಿತು. ರಾಮಾನುಜಾಚಾರ್ಯರ ಉನ್ನತ ಉದ್ದೇಶದ ಪ್ರಕಾರ ಚೇತನ ವರ್ಗದವರೆಲ್ಲರೂ ಮೋಕ್ಷಕ್ಕೆ ಅರ್ಹರು, ಆಚಾರ್ಯರದ್ವಾರ ಜೀವಾತ್ಮರು ಪರಮಾತ್ಮನ ಶರೀರ ಎಂಬ ಸಹಜಜ್ಞಾನದ ಅರಿವು ಎಲ್ಲರಿಗೂ ಮೂಡಬೇಕೆಂಬುದೇ ಆಗಿತ್ತು. ಪೆರಿಯ ಕೋಯಿಲ್ ನಂಬಿಯವರಿಗೆ ಸರ್ವೇಶ್ವರನನ್ನು ಸಾಕ್ಷಾತ್ಕರಿಸುವ ಮಾರ್ಗ ತಿಳಿಯದಿರುವುದನ್ನು ರಾಮಾನುಜರು ಅರಿತು ತಮ್ಮ ಶಿಷ್ಯರಾದ ಕೂರತ್ತಾಳ್ವರವರ ಮೂಲಕ ನಾಲ್ಕು ಸಾವಿರ ದ್ರಾವಿಡ ವೇದಗಳನ್ನು ತತ್ತ್ವಾರ್ಥಗಳೊಂದಿಗೆ ಅನುಗ್ರಹಿಸಿದರು. ಅದನ್ನು ರಾಗ, ತಾಳ ಬದ್ಧವಾಗಿ ಇಂಪಾಗಿ ಹಾಡುತ್ತಿದ್ದ ಪೆರಿಯನಂಬಿಯವರಿಗೆ ತಿರುವರಂಗತ್ತಮುದನಾರ್ ಎಂದು ಹೆಸರಾಯಿತು.

ಇನಿ ಯೆನ್‌ಕುರೈನಮ್ಮೆಮ್ಮೆರುಮಾನಾರ್
ತಿರುನಾಮತ್ತಾಲ್
ಮುನಿ ತನ್ನ ನೂತ್ತೆಟ್ಟು ಸ್ಸಾವಿತ್ತಿರಿಯೆನ್ನುಮ್
ನುಣ್‌ಪೊರುಳೈ
ಕಲಿತನ್ನ ಶೆಮ್ಮಾಶೊಲ್ ಕಲಿತ್ತುರೈಯನ್ದಾದಿ
ಪಾಡಿತ್ತನ್ದಾನ್
ಪುನಿದನ್ ತಿರುವರಂಗತ್ತ ಮುದಾಹಿಯ
ಪುಣ್ಣಿಯನೇ

ಶ್ರೀಮತಿ ಬಿ.ಎಸ್. ಮಣಿ

ತಿರುನಾರಾಯಣಪುರದ ನಿವಾಸಿಗಳಾಗಿದ್ದ ಶ್ರೀಮಾನ್ ಸೋಮಯಾಜಿ ಆಂಡಾನ್ ಎಂಬ ಮಹನೀಯರು ತಿರುವರಂಗತ್ತ ಮುದನಾರ್ ರವರ ಕೈಂಕರ್ಯ ಮಹತ್ತ್ವವನ್ನು ಮೇಲಿನ ತನಿಯನ್‌ದಲ್ಲಿ ತಿಳಿಸಿರುತ್ತಾರೆ.

ಪುಣ್ಯಪುರುಷರಾದ ಅಮುದನಾರ್‌ರವರು ವಿಶ್ವಾಮಿತ್ರಮುನಿಗಳು ತಂದು ಕೊಟ್ಟಿರುವ ಸಾವಿತ್ರಿ ಎಂಬ ಮಂತ್ರದ ಸೂಕ್ಷ್ಮಾರ್ಥವಾದ ಪ್ರಣವಾರ್ಥವನ್ನು ಒಳಗೊಂಡ ಅಷ್ಟಾಕ್ಷರಿ ಮಂತ್ರದ ಅಂತರಾರ್ಥವನ್ನು ನೂರೆಂಟು ಪದ್ಯವಾಗಿ, ಪ್ರತಿಪದ್ಯದಲ್ಲೂ ಶ್ರೀರಾಮಾನುಜರ ತಿರುನಾಮವನ್ನು ಅಳವಡಿಸಿ ಕಲಿತ್ತುರೈ ಎಂಬ ಛಂದಸ್ಸಿನಲ್ಲಿ, ಶಬ್ದ ಮತ್ತು ಶಕ್ತಿ ಹೊಂದಿಕೊಳ್ಳುವಂತೆ ಆದಿ–ಅಂತ್ಯರೂಪದಲ್ಲಿ ಕಿವಿಗೆ ಇಂಪಾಗಿ ಹಾಡಿ ಪ್ರತಿಪಾದಿಸಿರುತ್ತಾರೆ. ಇನ್ನು ಯಾವಕೊರತೆಯಾಗಲಿ, ಅಪೇಕ್ಷೆಯಾಗಲಿ ಇಲ್ಲ ಎಂದು ಆಂಡಾನ್ ತಿಳಿಸಿರುತಾರೆ

ಪ್ರಪನ್ನ ಗಾಯತ್ರಿ ಎಂಬ ರಾಮಾನುಜನೂತ್ತಂದಾದಿಯ ಮೊದಲ ಏಳು ಪದ್ಯಗಳಲ್ಲಿ, ಚೇತನನು ಪರಿಪೂರ್ಣತೆಗೆ ಪಾರಮಾರ್ಥಿಕವಾಗಿ ಹೊಂದ ಬೇಕಾದ ಹಲವು ತತ್ತ್ವಾಂಶಗಳನ್ನು ಅಮುದನಾರ್ ತಿಳಿಸಿದ್ದಾರೆ.

ಮೊದಲ ಪದ್ಯದಲ್ಲಿ ಸಂಬಂಧ ಜ್ಞಾನವೇ ಉಜ್ಜೀವನಕ್ಕೆ ಮಾರ್ಗ. ಆ ಪರಮಾತ್ಮನಿಗೆ ಸೇರಿದ ಜೀವಾತ್ಮನು ಎಂದೆಂದಿಗೂ ದೇವರ ಸ್ವತ್ತು ಎಂಬ ಅರಿವೇ ಜ್ಞಾನಕ್ಕೆ ಇರಬೇಕಾದ ಸಹಜಗುಣ ಎಂದು ಸೂಚಿಸಿರುತ್ತಾರೆ. ಇದೇ ಅಯೋಗವ್ಯವಛೇದ.

ಪೂಮನ್ನು ಮಾದು ಪೊರುನ್ದಿಯ ಮಾರ್ವನ್
ಪುಗಳ್ ಮಲಿನ್ದ
ಪಾಮನ್ನು ಮಾರನಡಿ ಪಣಿನ್ದುಯ್‌ನ್ದವನ್
ಪಲ್‌ಕಲೈಯೋರ್
ತಾಂಮನ್ನುವನ್ದ ಇರಾಮಾನುಶನ್ ಶರಣಾರ
ವಿನ್ದಮ್
ನಾಮ್‌ಮನ್ನಿ ವಾಳ ನೆಂಜೇಶೊಲ್ಲು
ವೋಮವನ್ ನಾಮಂಗಳೇ

ಪರಮಾತ್ಮನ ಹೃದಯದಲ್ಲಿ ನೆಲೆಸಿರುವ ಲಕ್ಷ್ಮೀದೇವಿಗೆ ವಾಸಸ್ಥಾನವಾದ ಭಗವಂತನ ಪವಿತ್ರ ಪಾದಯುಗವೇ ಚೇತನರಿಗೆಲ್ಲಾ ಕ್ಲೇಶರಹಿತ

ಓಂ ಶ್ರೀ ಮಾತ್ರೇ ನಮಃ

ಫೋನ್ :
ಕಚೇರಿ : 472014
ಮನೆ : 841253

# ನವಶಕ್ತಿನಿಲಯದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರ ಮಾಡುವ ಸಂಸ್ಥೆ.

1 ಶ್ರೀ ಮಹಾಮೇರು ಪಂಚಲೋಹಯಂತ್ರ
16×16 cm ಹಾಗೂ 10×10cm (ವೈಯಕ್ತಿಕ)

2 ಶ್ರೀ ಮಹಾಮೇರು ಪಂಚಲೋಹ ಯಂತ್ರ
6×6 cm ರೂ. 550-00

3. ಶ್ರೀ ಮಹಾಮೇರು ಪಂಚಲೋಹ
4 ×4 cm ರೂ. 350-00

4. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130-00

5. ಶ್ರೀಚಕ್ರ ಬೀಜಾಕ್ಷರದೊಡನೆ
42×42 cm ಹಾಗೂ 32×32 cm (ವೈಯಕ್ತಿಕ)

6 ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
24×24 cm ರೂ. 1150-00

7 ಶ್ರೀ ಮಹಾಸುದರ್ಶನ ಯಂತ್ರ
16×16 cm ರೂ. 600-00

8 ಶ್ರೀಚಕ್ರಯಂತ್ರ 8×8 cm ರೂ. 130-00

9. ಚಿದಂಬರ ಚಕ್ರ 8×8 cm ರೂ. 130-00

0. ಸುಬ್ರಹ್ಮಣ್ಯ ಯಂತ್ರ 8×8 cm ರೂ. 130-00

1. ಸುದರ್ಶನ ಯಂತ್ರ 8×8 cm ರೂ. 130-00

2. ನವಗ್ರಹ ಯಂತ್ರ 8×8 cm ರೂ. 130-00

3. ಸರ್ವಜನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದಶನಂ 16×48 cm ರೂ. 1600-00

4. ಸರ್ವಜನ ಧನ ಆಕರ್ಷಣ ಶ್ರೀ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನ 8×24 cm ರೂ. 450-00

15 ಶೂಲಿನಿ, ಶರಭೇಶ್ವರ, ಪ್ರತಿಂಗಾರ 16×48 cm
ರೂ. 1600-00

16: ದಶಮಹಾನಿಧಿಗಳು ಯಂತ್ರಗಳು (ವೈಯಕ್ತಿಕ)

17. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ ರೂ. 65-00

18. ಕಾಮಾಕ್ಷಿ ಶ್ರೀಚಕ್ರ ಪದಕ ರೂ 65-00

19. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ 65-00

20. ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65-00

21. ಶ್ರೀ ಮುರುಗನ್ ಆಕರ್ಷಣ ಪದಕ ರೂ. 55-00

22. ವಿವಾಹಪ್ರಾಪ್ತಿ ಪದಕ ರೂ. 65-00

23. ಶ್ರೀ ಅಯ್ಯಪ್ಪನ್ ಪದಕ (ಸನ್ನಿಧಿಯೊಡನೆ) ರೂ. 65-00

24 ಶ್ರೀಚಕ್ರಂ ಲಕ್ಷ್ಮಿ ಬೀಜದೊಡನೆ ರೂ. 65-00

25. ಶ್ರೀದೇವಿ ಕರುಮಾರಿ ಅಮ್ಮನ್ ಹಿತ್ತಾಳೆ ಪದಕ ರೂ 65-00

26. ನವಗ್ರಹ ಪದಕ ಬೊಂಬೆಗಳು ಯಂತ್ರಗಳೊಡನೆ ರೂ. 65-00

27. ದೃಷ್ಟಿನಿವಾರಕ ಯಂತ್ರ ಫ್ರೇಂನೊಡನೆ ರೂ. 65-00

28. ವಿದ್ಯುದೀಕ್ಷಿತ ಹಿತ್ತಾಳೆ ಕಡಗ
12 ರಾಶಿಗಳಿಗೆ-ಒಂದೊಂದೂ ರೂ. 25-00

29. ತುಲಸೀ ಮಾಲೆ 54 ಮಣಿಗಳು ರಜತ ಕವಚದೊಡನೆ
ರೂ. 125-00

30. ರುದ್ರಾಕ್ಷಿಮಾಲೆ 54 ಮಣಿಗಳು ರಜತಕವಚದೊಡನೆ
ರೂ. 300-00

31. ಸಹಜ ಕಮಲಮಾಲೆ 54 ಮಣಿಗಳು " ರೂ. 180-00

32. ರಸಲಿಂಗ, ಸ್ಫಟಿಕಲಿಂಗ, ಮರಕತಲಿಂಗ
ಬಾನಲಿಂಗ, ಸಾಲಿಗ್ರಾಮ, ಪಂಚಾಯತನ
ಸೆಟ್, ವಲಂಪುರಿ ಶಂಖ, ಪಂಚಲೋಹ
ವಿಗ್ರಹ, ಪಾದರಸಮಣಿ ಪಾದರಸ ವಿನಾಯಕ
ಸಹ ದೊರೆಯುವುವು ಬೆಲೆ ವ್ಯಕ್ತಿಗತ.

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ, ಗೃಹಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಅಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ. 150-00 ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ. ಕ್ಯಾಟಲಾಗ್ ಉಚಿತ, ವಿದೇಶಿ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು.

**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ತುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

ಧಾರಾವಾಹಿ

# ಭಾರತೀಯ ಪರಮಾರ್ಥ

ಶ್ರುತಿಗಳಲ್ಲಿ "ಬ್ರಹ್ಮವಿತ್ ಬ್ರಹ್ಮೈವಭವತಿ" (ಮು.ಉ. 3-2-9) ಎಂದು ಹೇಳಿರುವುದು. ಇದರ ಅರ್ಥ–ಬ್ರಹ್ಮವನ್ನು ಅರಿತವನು ಬ್ರಹ್ಮ ಸಮಾನನಾಗುವನು. ಎಂದರೆ ಮುಕ್ತನಾಗುವನು ಎಂದು. ಹಿಂದಿನ ಪ್ರಕರಣದಲ್ಲಿ ಬ್ರಹ್ಮನೊಬ್ಬನಿರುವನು; ಚರಾಚರ ಜಗತ್ತಿನ ಅಂತಸ್ಸತ್ವವೇ ಆ ಪರಬ್ರಹ್ಮನು ಎಂದು ಹೇಳಿದೆವು. ಅಂಥಾ ಪರಮಾತ್ಮನ ಸಾಕ್ಷಾತ್ಕಾರದಿಂದ ಸಂಸಾರದಿಂದ ವಿಮುಕ್ತನಾಗಿ ಶಾಶ್ವತವಾದ ಮೋಕ್ಷಾನಂದವನ್ನು ಅನುಭವಿಸಬಹುದು ಎಂದು ಶಾಸ್ತ್ರಗಳು ಹೇಳುವುದರಿಂದ ಪರಬ್ರಹ್ಮ ಜ್ಞಾನವು ನಮ್ಮೆಲ್ಲರಿಗೂ ಅತ್ಯವಶ್ಯಕವೆಂಬುದು ವ್ಯಕ್ತವಾಗುವುದು.

ಮೊದಲನೆ ಪ್ರಕರಣದಲ್ಲಿ ಹೇಳಿರುವ ವಿಷಯವನ್ನೇ ಸಮರ್ಥಿಸಿ ಶ್ರುತಿಗಳು "ಯತೋವಾ ಇಮಾನಿ ಭೂತಾನಿ ಜಾಯನ್ತೇ। ಯೇನ ಜಾತಾನಿ ಜೀವನ್ತಿ। ಯತ್ಪ್ರಯನ್ತ್ಯಭಿಸಂವಿಶನ್ತಿ। ತದ್ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ। (ತೈ. ಆ. 3-1-1) ಎಂದರೆ–ಯಾವನಿಂದ ಈ ಚರಾಚರಜಗತ್ತು ಸೃಷ್ಟಿಸಲ್ಪಟ್ಟಿತೋ, ಹಾಗೆ ಸೃಷ್ಟಿಸಲ್ಪಟ್ಟ ಜಗತ್ತು ಯಾವನ ಆಧಾರದಿಂದ ಜೀವಿಸುತ್ತಿದೆಯೋ; ಅಂತ್ಯದಲ್ಲಿ ಇದೆಲ್ಲವೂ ಯಾವನಲ್ಲಿ ಲಯವಾಗುವುದೋ ಅವನೇ ಪರಬ್ರಹ್ಮ; ಮತ್ತು ಅವನೇ ನಮ್ಮೆಲ್ಲರಿಂದಲೂ ಉಪಾಸಿಸಲ್ಪಡಬೇಕಾದ ದೈವವು ಎಂದು ಶ್ರುತಿಯಲ್ಲಿ ಹೇಳಿರುವುದು. ಇಲ್ಲಿ ವಿಶದವಾಗುವ ವಿಷಯವೇನೆಂದರೆ– ಪರಬ್ರಹ್ಮನು ಚರಾಚರ ರೂಪವಾದ ಈ ಜಗತ್ತನ್ನು ಸೃಷ್ಟಿಸಿದನು. ಹಾಗೆ ಸೃಷ್ಟಿಸಿದ ಜಗತ್ತಿನ ಪೋಷಣೆಗೆ ಅವನೇ ಆಧಾರಸ್ವರೂಪನಾಗಿರುವನು: ಮತ್ತು ಕಾಲಾಂತರದಲ್ಲಿ ಈ ಜಗತ್ತು ಅವನಲ್ಲೇ ಲಯವಾಗುವುದು. ಜೀವಕೋಟಿಗಳಿಗೆಲ್ಲಾ ಅವನೇ ಉಪಾಸಿಸಲ್ಪಡಬೇಕಾದ ದೈವವು. ಆದರಿಂದ ಅವನೇ ಮೋಕ್ಷಪ್ರದನು ಎಂಬ ವಿಷಯಗಳು ವ್ಯಕ್ತವಾಗುವುವು. ಜಗತ್ಸೃಷ್ಟಿಯನ್ನು ವರ್ಣಿಸುವ ಶಾಸ್ತ್ರಗಳಲ್ಲಿ ಹಾಗೆ ಪರಬ್ರಹ್ಮನಲ್ಲಿ ಲೀನವಾದ ಜಗತ್ತು ಸಕಾಲದಲ್ಲಿ ಪುನಃ ಸೃಷ್ಟಿಸಲ್ಪಡುವುದು; ಈ ಸೃಷ್ಟಿ, ಪ್ರಳಯಗಳು ಪ್ರವಾಹರೂಪದಲ್ಲಿ ಒಂದಾದ ಮೇಲೊಂದರಂತೆ ಶಾಶ್ವತವಾಗಿ ಅನಾದಿಕಾಲದಿಂದಲೂ ನಡೆಯುತ್ತಲೇ ಇರುವುವು, ಇದಕ್ಕೆ ಕೊನೆಯೆಂಬುವುದೇ ಇಲ್ಲ; ಎಂದರೆ ಇದಕ್ಕೆ ಆದಿ ಗೊತ್ತಿಲ್ಲ; ಮತ್ತು ಅಂತ್ಯವಿಲ್ಲ ಎಂದು ಹೇಳಿರುವುದು.

ಪರಬ್ರಹ್ಮನು ಜಗತ್ತನ್ನು ಸೃಷ್ಟಿಸಿದಾಗ ಈ ಚರಾಚರ ಜಗತ್ತು ಸ್ಥೂಲರೂಪ (*Gross-State*) ದಲ್ಲಿದ್ದು ನಮ್ಮೆಲ್ಲರ ಕಣ್ಣಿಗೂ ಕಾಣಿಸುವಂತೆ (ಎಂದರೆ ಈಗ ನಾವು ನೋಡುತ್ತಿರುವಂತೆ) ವ್ಯವಹರಿಸುತ್ತಿರುವುದು. ಮತ್ತು ಪ್ರಾಪಂಚಿಕ ವ್ಯವಹಾರಗಳಲ್ಲೆಲ್ಲಾ ಜೀವಕೋಟಿಗಳು ಪಾಲುಗೊಳ್ಳುತ್ತಿರುವುವು. ಇದನ್ನು ಸ್ಥೂಲ ರೂಪದಲ್ಲಿ ಪ್ರದರ್ಶಿತವಾಗಿರುವ ಪರಬ್ರಹ್ಮವೇ ಎಂದು ಶಾಸ್ತ್ರಗಳು ಹೇಳುವುವು. ಶ್ರುತಿಗಳಲ್ಲಿ "ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಸ್ಸಹಸ್ರ ಪಾತ್। ಸ ಭೂಮಿಂ ವಿಶ್ವತೋ ವೃತ್ವಾ. ಅತ್ಯತಿಷ್ಠದ್ದಶಾಂಗುಲಂ॥" (ಪು ಸೂ ೧) ಎಂದರೆ ಪ್ರಪಂಚದಲ್ಲಿರುವ ಜೀವಕೋಟಿಗೆ ಶರೀರಗಳು, ಕಣ್ಣುಗಳು, ಕಾಲುಗಳು ಎಲ್ಲಾ ಆ ಪರಮಪುರುಷನೇ – ಅವನೇ ಸಂಪೂರ್ಣವಾದ ಪ್ರಪಂಚವನ್ನೆಲ್ಲಾ ಆವರಿಸಿಕೊಂಡಿರುವನು – ಎಂದು ಈ ಸ್ಥೂಲ ಪ್ರಪಂಚ ಮೊತ್ತವೂ ಪರಬ್ರಹ್ಮನೇ ಎಂದು ಹೇಳಿರುವುದು. ಇನ್ನೂ ಅನೇಕ ಶ್ರುತಿಗಳೂ ಇದನ್ನೇ ಹೇಳುತ್ತವೆ.

## ಪರಬ್ರಹ್ಮ

ಪ್ರಳಯಕಾಲದಲ್ಲಿ ಜಗತ್ತು ಪರಬ್ರಹ್ಮನಲ್ಲಿ ಲೀನವಾಗುವುದು ಎಂದು ಶಾಸ್ತ್ರಗಳು ಹೇಳುವುವು. ಹಾಗೆಂದರೆ ಪ್ರಪಂಚವೆಲ್ಲವೂ ನಾಶವಾಗಿ ಹೋಗುವುದು ಎಂದು ಅರ್ಥವಲ್ಲ. ಸ್ಥೂಲ (*Gross*) ರೂಪದಲ್ಲಿ ನಮ್ಮ ಕಣ್ಣಿಗೆ ಕಾಣುತ್ತಿರುವ ಜಗತ್ತು ಪ್ರಳಯಕಾಲದಲ್ಲಿ ಸೂಕ್ಷ್ಮ (*Subtle, atomic*) ರೂಪವನ್ನು ಪಡೆದು ಪರಬ್ರಹ್ಮನಲ್ಲಿ ಹೋಗಿ ಸೇರುವುದು ಎಂದು ಅರ್ಥ. ಆಗ ಅದು ಕಣ್ಣಿಗೆ ಕಾಣಿಸದಂತೆ ಸೂಕ್ಷ್ಮರೂಪದಲ್ಲಿದ್ದು ಪರಬ್ರಹ್ಮನಲ್ಲಿ ಸೇರಿರುವುದು ಎಂದು ಶಾಸ್ತ್ರಗಳು ಹೇಳುವುವು. ಇದರಿಂದ ಪ್ರಕೃತಿಯು ಸೃಷ್ಟಿಯಲ್ಲಿ ಸ್ಥೂಲ ರೂಪದಲ್ಲೂ ಪ್ರಳಯಕಾಲದಲ್ಲಿ ಸೂಕ್ಷ್ಮ (ಅಣು) ರೂಪದಲ್ಲೂ ಇದ್ದು ಪರಬ್ರಹ್ಮನೊಡನೆ ಸೇರಿರುವುದು ಎಂದು ವ್ಯಕ್ತವಾಗುವುದು. ನಮ್ಮ ಕಣ್ಣಿಗೆ ಕಾಣುವ ನೀರನ್ನು ಕಾಯಿಸಿದಾಗ ಅದು ಆವಿ (*Steam*) ಯಾಗಿ ಕಣ್ಣಿಗೆ ಕಾಣಿಸದಂತೆ ಹೊರಟು ಹೋಗುವುದಿಲ್ಲವೇ. ಇಲ್ಲಿ ನೀರು ನಾಶವಾಗಲಿಲ್ಲ; ಸ್ಥೂಲರೂಪದಿಂದ ಸೂಕ್ಷ್ಮರೂಪಕ್ಕೆ ಬದಲಾಯಿಸಿತು ಅಷ್ಟೇ. ಸೃಷ್ಟಿಪ್ರಳಯಗಳೂ ಈ ವಿಧವಾದದ್ದು, ಪದಾರ್ಥಗಳು ಅಣುಸ್ವರೂಪದಲ್ಲಿದ್ದಾಗ ಅವು ಕಣ್ಣಿಗೆ ಕಾಣಿಸುವುದಿಲ್ಲ, ಅನೇಕಾನೇಕ ಅಣುಗಳು ಸೇರಿದಾಗ ಸ್ಥೂಲರೂಪವನ್ನು ಪಡೆದು ಕಣ್ಣಿಗೆ ಕಾಣಿಸುತ್ತವೆ. ಆಗ ಅದನ್ನು ನಾವು ಉಪಯೋಗಿಸುತ್ತೇವೆ.

ಶ್ರುತಿಗಳಲ್ಲಿ 'ಅಸದೇವ ಇದಮಗ್ರ ಆಸೀತ್' (ಛಾಂ. 6-2-1) ಎಂದರೆ ಆದಿಯಲ್ಲಿ ಎಂದರೆ ಪ್ರಳಯಕಾಲದಲ್ಲಿ ಮೊದಲು ಇದ್ದದ್ದು "ಅಸತ್", ಅಸತ್ ಎಂದರೆ ನಾಮರೂಪಗಳಿಗೆ ಯೋಗ್ಯತೆಯಿಲ್ಲದೆ ಚಿತ್ತು, ಅಚಿತ್ತು ಇತ್ಯಾದಿ ಯಾವ ವಿಭಾಗಗಳಿಗೂ ಅರ್ಹತೆಯಿಲ್ಲದೆ ಸೂಕ್ಷ್ಮರೂಪದಲ್ಲಿರುವ ಪ್ರಕೃತಿಯೊಡನೆ ಕೂಡಿರುವ ಪರಬ್ರಹ್ಮ ಎಂದು ಅರ್ಥ. ಸೃಷ್ಟಿಕಾಲವು ಆರಂಭವಾದ ಒಡನೆ "ತದೈಕ್ಷತ ಬಹುಸ್ಯಾಂ" (ಛಾಂ 6-2-3) ಎಂಬ ಶ್ರುತಿ ವಾಕ್ಯರೀತ್ಯಾ ಪರಬ್ರಹ್ಮನು ತಾನು ಅನೇಕವಾಗಿ ಚರಾಚರ ರೂಪವಾದ ಸ್ಥೂಲಜಗತ್ತಾಗಬೇಕು ಎಂದು ಸಂಕಲ್ಪಿಸಿದನು. ಎಂದು ಶ್ರುತಿ ಹೇಳುವುದು. ಆಗ "ಸದೇವಸೋಮ್ಯೇದ ಮಗ್ರ ಆಸೀತ್" (ಛಾಂ. 6-2-1) ಎಂದರೆ ನಾಮರೂಪಗಳಿಗೆ ಯೋಗ್ಯವಾಗುವಂತೆ ಮೂಲಪ್ರಕೃತಿಯು ಒಂದು ವ್ಯತ್ಯಾಸವನ್ನು ಪಡೆಯುವುದು. ಆಗ ಅದಕ್ಕೆ 'ಸತ್' ಎಂದು ಹೆಸರು. ಮುಂದೆ ಶ್ರುತಿಯು "ಅನೇನಜೀವೇನಾತ್ಮನಾನು ಪ್ರವಿಶ್ಯ ನಾಮರೂಪೇವ್ಯಾಕರವಾಣಿ (ಛಾಂ. 6-3-2) ಎಂದರೆ ಪರಮಾತ್ಮನು ಅನಂತಾನಂತ ಜೀವಾತ್ಮರೊಳಗೆ ಅಂತರಾತ್ಮಾವಾಗಿ ಪ್ರವೇಶಿಸಿ ಅವುಗಳಿಗೆ ನಾಮರೂಪಗಳೊಡನೆ ಕೂಡಿದ ಪ್ರಕೃತಿ ಶರೀರಗಳನ್ನುಂಟುಮಾಡಿ ಈ ದೃಶ್ಯಪ್ರಪಂಚವನ್ನು ಸೃಷ್ಟಿಸಿದನು–ಎಂದು ಹೇಳುವುದು. ಪ್ರಪಂಚ ಸೃಷ್ಟಿ ಶಾಸ್ತ್ರಗಳಲ್ಲಿ ಈ ವಿಷಯವು ಇನ್ನೂ ವಿಸ್ತಾರವಾಗಿ ವಿವರಿಸಿರುವುದು. ಸ್ಥಳ ಸಂಕೋಚದಿಂದ ಆ ವಿವರಣೆಗಳನ್ನು ಇಲ್ಲಿ ಬಿಟ್ಟಿರುವೆವು.

ಪರಮಾತ್ಮನಿಗೂ ಚೇತನಾಚೇತನರಿಗೂ ಇರುವ ಶರೀರಿ ಶರೀರ ಸಂಬಂಧ:– ಶರೀರಿ ಎಂದರೆ ಶರೀರದೊಳಗಿರುವ ಆತ್ಮ ಎಂದು ಅರ್ಥ. ಪರಮಾತ್ಮನಿಗೂ ಚೇತನಾಚೇತನರಿಗೂ ಇರುವ ಪರಸ್ಪರ ಸಂಬಂಧದ ವಿಷಯದಲ್ಲಿ ಜ್ಞಾನಿಗಳಲ್ಲಿ ವಿವಿಧ ಅಭಿಪ್ರಾಯಗಳಿವೆ.

ಶ್ರೀ ಎಂ.ಓ. ಎಸ್. ಅಯ್ಯಂಗಾರ್

ಕೆಲವರು ಆತ್ಮಸ್ವರೂಪನಾದ ಪರಮಾತ್ಮನೇ ಈ ಚರಾಚರ ಜಗತ್ತಾಗಿ ಪರಿಣಮಿಸುವನು ಎನ್ನುವರು, ಎಂದರೆ ಪ್ರಳಯಕಾಲದಲ್ಲಿ ಅಗೋಚರನಾಗಿದ್ದ ಪರಮಾತ್ಮನು ಸೃಷ್ಟಿಕಾಲದಲ್ಲಿ ತಾನೇ ದೃಶ್ಯರೂಪವಾದ ಚರಾಚರ ಜಗತ್ತಾಗಿ ಪರಿಣಮಿಸಿ ತಾನೇ ಈ ವ್ಯವಹಾರಗಳನ್ನೆಲ್ಲಾ ಮಾಡುತ್ತಿರುವನು ಎನ್ನುವರು.

ಈ ಪ್ರಪಂಚದಲ್ಲಿ ಜ್ಞಾನದೊಡನೆ ಕೂಡಿರುವ ಮನುಷ್ಯ, ಮೃಗ ಪಕ್ಷಿ ಕ್ರಿಮಿ ಕೀಟಾದಿ ಜೀವಿಗಳೂ ಜಲಚರಗಳೂ ತಮ್ಮ ದೇಹದೊಡನೆ ಹುಟ್ಟಿ ಬೆಳೆದು ಪ್ರಪಂಚದಲ್ಲಿ ಪ್ರಕೃತಿಯ ವಿವಿಧ ವಿಚಿತ್ರ ಪರಿಣಾಮರೂಪಗಳಾದ ಆಹಾರ ಮತ್ತು ಪ್ರಾಪಂಚಿಕ ಸುಖದುಃಖರೂಪವಾದ ವಿಷಯ ಭೋಗಗಳನ್ನನುಭವಿಸಿ, ಕೆಲವು ವರ್ಷಗಳಿದ್ದು ಸಾಯುವರು. ಈ ಜನನ, ಜೀವನ ಮರಣಗಳು ಪ್ರವಾಹರೂಪದಲ್ಲಿ, ಎಂದರೆ ಒಂದಾದ ಮೇಲೊಂದರಂತೆ ವಿರಾಮವಿಲ್ಲದೆ ಅನಾದಿಕಾಲದಿಂದಲೂ ಇದ್ದು ಅಂತ್ಯವಿಲ್ಲದೆ ಮುಂದುವರಿಯುತ್ತಿರುವುದೆಂಬುದನ್ನು ನಾವು ಶಾಸ್ತ್ರಗಳಿಂದ ಅರಿಯುವೆವು

ಪ್ರಕೃತಿ ಮತ್ತು ಪ್ರಾಕೃತವಿಷಯಗಳು ಹೇಯವೆಂದೂ, ಅಜ್ಞಾನಕ್ಕೂ ಪಾಪಗಳಿಗೂ ಮೂಲವೆಂದೂ ಶಾಸ್ತ್ರಗಳಿಂದ ತಿಳಿದುಬರುವುದು. ಈ ಸಂಸಾರವು ಸುಖದ ಸುಪ್ಪತ್ತಿಗೆಯಲ್ಲ. ಇದರಲ್ಲಿ ಕಷ್ಟಗಳೇ ಜಾಸ್ತಿ ಎಂದು ಜ್ಞಾನಿಗಳನೇಕರು ಹೇಳುತ್ತಲೇ ಇರುವರು ಪ್ರಕೃತಿ ಗುಣಗಳಾದ ರಜಸ್ತಮೋಗುಣಗಳು ಸತ್ಯವಾದ ಬ್ರಹ್ಮಜ್ಞಾನವನ್ನು ಮನುಷ್ಯನಿಂದ ಮರೆಸಿ ಅವನನ್ನು ದುಃಖದಲ್ಲಿ ಅಥವಾ ಸುಖದುಃಖಮಿಶ್ರವಾದ ಸಂಸಾರದಲ್ಲಿ ತಳ್ಳುವುವು ಎಂದು ಶಾಸ್ತ್ರಗಳು ಹೇಳುವುವು ಪ್ರಕೃತಿವಶ್ಯರಾದ ಜೀವಾತ್ಮರು ಕರ್ಮಪರವಶರಾಗಿ ಅಜ್ಞಾನದಿಂದ ಪ್ರಾಪಂಚಿಕ ಸುಖದಲ್ಲಿ ಮೋಹಿತರಾಗುವರೆಂದೂ ಶಾಸ್ತ್ರಗಳು ಸಾರಿರುವುವು.

"ಸರ್ವಂ ಖಲ್ವಿದಂ ಬ್ರಹ್ಮ" (ಛಾಂ. 3-14-1), "ನೇಹ ನಾನಾಸ್ತಿ ಕಿಂಚನ" (ಬೃ. 6-4-19) "ಬ್ರಹ್ಮೈವೇದಗ್ಂ ಸರ್ವಂ" (ಬೃ. 4-5-1) ಎಂದರೆ ಪ್ರಪಂಚದಲ್ಲಿರುವುದೆಲ್ಲವೂ ಬ್ರಹ್ಮವೇ. ಬ್ರಹ್ಮವಲ್ಲದ್ದು ಬೇರಾವುದೂ ಇಲ್ಲ–ಈ ಸಮಸ್ತ ಪ್ರಪಂಚವೂ ಬ್ರಹ್ಮವೇ–ಇತ್ಯಾದಿ ಶ್ರುತಿ ವಾಕ್ಯಗಳು ಪರಬ್ರಹ್ಮವೇ ಪ್ರಪಂಚವಾಗಿ ಪರಿಣಮಿಸುವುದು ಎಂಬುದಕ್ಕೆ ಪ್ರಮಾಣವಾಗುವುದು ಎಂದು ಹೇಳುವರು.

ಆದರೆ ಅದೇ ಶ್ರುತಿಗಳು "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. 2-1-1) "ಆನಂದೋ ಬ್ರಹ್ಮ" (ತೈ. 3-6-1) "ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ (ವಿ.ಸ) "ನಿಷ್ಕಳಂ ನಿಷ್ಕ್ರಿಯಂ ಶಾನ್ತಂ' (ಶ್ವೇ 6-19) ಇತ್ಯಾದಿಯಾಗಿ–ಎಂದರೆ ಪರಬ್ರಹ್ಮನು ಸತ್ಯಸ್ವರೂಪನು, ಎಂದರೆ ಶಾಶ್ವತನು, ನಿತ್ಯನು ಜ್ಞಾನ

ಮಯನು, ಜ್ಞಾನಸಂಕೋಚವಿಲ್ಲದವನು, ಆನಂದಮಯನು, ಅವನಿಗೆ ದುಃಖದ ಗಂಧಲೇಶವೂ ಇಲ್ಲ; ಅವನು ವಿಕಾರರಹಿತನು, ಪರಿಶುದ್ಧ ಸ್ವರೂಪನು, ಕಳಂಕರಹಿತನು, ಕರ್ಮಗಳು ಅವನನ್ನು ಸ್ಪರ್ಶಿಸುವುದಿಲ್ಲ; ಶಾಂತಸ್ವರೂಪನು ಇತ್ಯಾದಿಯಾಗೆಲ್ಲಾ ಹೇಳಿರುವುದು ಹೀಗಿರುವಾಗ ಪರಬ್ರಹ್ಮನೇ ಪ್ರಪಂಚವಾಗಿ ಪರಿಣಮಿಸುವನೆಂದರೆ – ಕ್ಷಣಕ್ಷಣಕೂ ಬದಲಾಯಿಸುತ್ತಿರುವ ಪ್ರಕೃತಿಯ ಸ್ವಭಾವಗಳು ಪರಮಾತ್ಮನಲ್ಲಿ ಮೊದಲು ಇದ್ದಿರಬೇಕು; ಜೀವನಲ್ಲಿ ಕಂಡುಬರುವ ಅಜ್ಞಾನ, ರಜಸ್ತಮೋಗುಣಗಳು ಇವೆಲ್ಲಾ ಬ್ರಹ್ಮನಲ್ಲಿ ಮೊದಲೇ ಇದ್ದಿರಬೇಕು, ಪ್ರಕೃತಿ ಮತ್ತು ಜೀವರಾಶಿಗಳಲ್ಲಿರುವ ಅಜ್ಞಾನ ವಿಕಾರಗಳೆಲ್ಲವೂ ಮೊದಲೇ ಬ್ರಹ್ಮನಲ್ಲಿ ಇದ್ದಿರಬೇಕಾಗುವುದಲ್ಲವೇ ? ಇವೆಲ್ಲಾ ಶ್ರುತಿವಿರುದ್ಧಗಳಾದ್ದರಿಂದ ಈ ಸಿದ್ಧಾಂತವು ಸರಿಯಲ್ಲವೆಂದು ಕೆಲವರು ಆಕ್ಷೇಪಿಸುವರು.

ಮತ್ತೊಂದು ಪಂಗಡದ ವಿಜ್ಞಾನಿಗಳು ಹೇಳುವುದೇನೆಂದರೆ–ಈಶ್ವರನು ತಾನೇ ಜಗತ್ತಾಗಿ ಪರಿಣಮಿಸುವನೆಂದು ನಾವು ಹೇಳುವುದಿಲ್ಲ. ಅವನು ಸತ್ಯಜ್ಞಾನಾನಂದ ಸ್ವರೂಪನೇನೋ ಹೌದು. ನಾವು ಹೇಳುವುದೇನೆಂದರೆ–ಪರಿಶುದ್ಧಾತ್ಮ ಸ್ವರೂಪನಾದ ಪರಬ್ರಹ್ಮನನ್ನು ಮಾಯೆಯು ಆವರಿಸುವುದರಿಂದ ಅವನು ಜಗದ್ರೂಪವಾಗಿರುವಂತೆ ತೋರುವನು, ಅಷ್ಟೇ, ಹಾಗೆ ತೋರುವ ಜಗತ್ತು ಬರೀ ಭ್ರಮೆ, ಮಿಥ್ಯೆ, ಸತ್ಯವಲ್ಲ, ಜಗತ್ತಿಗೆ ಅಸ್ತಿತ್ವವೇ ಇಲ್ಲ; ಎಂದರೆ ನಿಜವಾಗಿಯೂ ಈ ಜಗತ್ತು ಇಲ್ಲವೇ ಇಲ್ಲ. ಇರುವುದೆಲ್ಲಾ ಪರಮಾತ್ಮನೊಬ್ಬನೇ. ಅವನಿಗೆ ಗುಣಗಳಿಲ್ಲ, ರೂಪವಿಲ್ಲ, ನಿರ್ವಿಶೇಷ ಚಿನ್ಮಾತ್ರನು. ಲೋಕದಲ್ಲಿ ಅನೇಕರಾಗಿ ಕಾಣುವ ಜೀವಾತ್ಮರು ನಿಜವಾಗಿಯೂ ಇಲ್ಲವೇ ಇಲ್ಲ. ನಮಗೆ ಕಾಣುವ ಜೀವಾತ್ಮರೆಲ್ಲರೂ ಮಾಯೆಯಲ್ಲಿ ತೋರುವ ಆ ಏಕೈಕ ಬ್ರಹ್ಮನ ಪ್ರತಿಬಿಂಬಗಳು. ಈ ಮೇಲಿನ ಸತ್ಯಸ್ಥಿತಿಯನ್ನು ಅರಿತು ಪರಮಾತ್ಮನನ್ನು ಉಪಾಸಿಸುವವರು ಮುಕ್ತಿಯನ್ನು ಪಡೆಯುವರು ಎಂದೂ ಹೇಳುವರು.

ಆದರೆ ಪರಬ್ರಹ್ಮನು ಮಾಯೆಯಿಂದ ಆವರಿಸಲ್ಪಟ್ಟು ಜಗತ್ತಾಗಿ ತೋರುವನು ಎಂಬ ಸಿದ್ಧಾಂತಕ್ಕೆ ವೇದದಲ್ಲಿ ಪ್ರಮಾಣವೇ ಇಲ್ಲವೆಂದು ಕೆಲವರು ಹೇಳುವರು, ಇರುವುದೆಲ್ಲಾ ಪರಬ್ರಹ್ಮವೊಂದೇ ಬೇರೇನೂ ಇಲ್ಲ ಎಂದರೆ ಆಗ ಈ ಮಾಯೆಯೆಂಬುವುದು ಎಲ್ಲಿಂದ ಹುಟ್ಟಿಕೊಂಡಿತು? ಅದು ಯಾತಕ್ಕೆ ಬ್ರಹ್ಮನನ್ನು ಆವರಿಸಬೇಕು? ಪ್ರಪಂಚ ಸೃಷ್ಟಿಯನ್ನು ವಿವರಿಸುವ ಶಾಸ್ತ್ರಗಳಲ್ಲಿ ಈ ವಿಷಯವೇ ಇಲ್ಲವಲ್ಲ, ನಿಮ್ಮ ಸಿದ್ಧಾಂತಕ್ಕೆ ಆಧಾರವೇನು ? ಜಗತ್ತಿನಲ್ಲಿರುವುದೆಲ್ಲಾ ಒಂದೇ ಆತ್ಮ, ಅದೇ ಪರಬ್ರಹ್ಮ, ಎರಡನೆಯ ಆತ್ಮವೇ ಇಲ್ಲ ಎಂದರೆ ಆಗ ಇದನ್ನೆಲ್ಲಾ ಅರಿಯಬೇಕಾದವರು ಯಾರು ? ಪರಬ್ರಹ್ಮನನ್ನು ಅರಿತು ಉಪಾಸಿಸಬೇಕಾದವರು ಯಾರು ? ಉಪಾಸಿಸಿ ಮುಕ್ತಿಯನ್ನು ಪಡೆಯಬೇಕಾದ ಅಜ್ಞರಾಗಿ ಸಂಸಾರ ದುಃಖವನ್ನು ಅನುಭವಿಸಿ ಕಷ್ಟಪಡುತ್ತಿರುವ ಇತರ ಜೀವಾತ್ಮರಿದ್ದರಲ್ಲವೆ ಮುಕ್ತಿಯ ಯೋಚನೆ ಮತ್ತು ಉಪಾಸನೆಗಳ ಅವಶ್ಯಕತೆ? ಆಗ ಈ ವೇದಾಂತಾದಿ ಶಾಸ್ತ್ರಗಳು, ಈ ತತ್ತ್ವೋಪದೇಶಗಳು, ಉಪಾಸನಾವಿಧಿಗಳು, ಯೋಗಶಾಸ್ತ್ರ ಇವೆಲ್ಲಾ ಯಾರಿಗಾಗಿ ಈ ಪ್ರಪಂಚದಲ್ಲಿ ಪ್ರಚಾರದಲ್ಲಿರಬೇಕು ? ಈ ಭಗವದವತಾರಗಳು, ಭಕ್ತರ ಮತ್ತು ಜ್ಞಾನಿಗಳ ತತ್ತ್ವೋಪದೇಶಗಳು ಇವೆಲ್ಲದರ ಪ್ರಯೋಜನವೇನು ? ಎಂದು ಕೇಳುವರು. ಅಜ್ಞನಾಗಿ ಮರ್ತ್ಯನಾದ ಶಿಷ್ಯನೊಬ್ಬನಿದ್ದರಲ್ಲವೆ ಒಬ್ಬ ಗುರುವಿನ ಉಪದೇಶ ಅವಶ್ಯಕ ? ಶಿಷ್ಯನೂ ಬ್ರಹ್ಮನೇ ಗುರುವೂ ಬ್ರಹ್ಮನೇ ಆದರೆ ಆಗ ಗುರು ಶಿಷ್ಯರ ವ್ಯವಹಾರವೇ ಇರಕೂಡದು ಎನ್ನುವರು. ಹೀಗೆ ವಾದ ವಿವಾದಗಳು ಅನೇಕಬಗೆಯಾಗಿರುವುವು

ಮತ್ತೊಂದು, ಎಂದರೆ ಮೂರನೇ ಪಂಗಡದವರು ವೇದಾಂತಾದಿ ಸಮಸ್ತ ಶಾಸ್ತ್ರಗಳಲ್ಲಿ ಹೇಳಿರುವುದೆಲ್ಲವನ್ನೂ ಸಂಪೂರ್ಣವಾಗಿ ಪರಿಗ್ರಹಿಸಿ ಪರಿಶೀಲಿಸಿ ವೇದಾಂತ ಶಾಸ್ತ್ರರೀತ್ಯಾ ಒಬ್ಬ ಪರಬ್ರಹ್ಮ, ಅನೇಕ ಜೀವಾತ್ಮರುಗಳು, ಮತ್ತು ಅಚೇತನವಾದ ಪ್ರಕೃತಿ ಇವು ಮೂರೂ ವೇದಾಂತ ಸಿದ್ಧವಾದ ಶಾಶ್ವತವಸ್ತುಗಳೆಂಬುವುದು ಬಹಳ ವಿಶದವಾಗಿ ಶ್ರುತಿಗಳಲ್ಲಿ ಘೋಷಿಸಲ್ಪಟ್ಟು, ಅವುಗಳ ಪರಸ್ಪರ ಸಂಬಂಧವೂ ಸಂಶಯಗಳಿಗೆ ಆಸ್ಪದವಿಲ್ಲದಂತೆ ಚಿತ್ರಿಸಲ್ಪಟ್ಟಿರುವುದಾಗಿ ಹೇಳುವರು.

ಭಗವದ್ಗೀತೆಯಲ್ಲಿ "ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ'' (ಭ.ಗೀ. 13–19) ಎಂದರೆ ಪ್ರಕೃತಿ ಮತ್ತು ಪುರುಷ ಎಂದರೆ ಜೀವಾತ್ಮರಿಬ್ಬರೂ ಶಾಶ್ವತ ವಸ್ತುಗಳು ಎಂದು ಶ್ರೀಕೃಷ್ಣನು ಹೇಳಿರುವನು. ಪರಬ್ರಹ್ಮನಂತೆಯೇ ಇವೂ ಶಾಶ್ವತ ಮತ್ತು ಅನಾದಿ, ಎಂದರೆ ಹುಟ್ಟು ಸಾವು ಎರಡೂ ಇಲ್ಲದವರು ಎಂದು ಅರ್ಥ ಇಲ್ಲಿ ಹೇಳಿರುವ 'ಪುರುಷ' ಎಂಬ ಪದವನ್ನು ಇದೇ ಗೀತೆಯಲ್ಲಿ ಮುಂದೆ ವಿವರಿಸಿ "ದ್ವಾವಿಮೌ ಪುರುಷೋ ಲೋಕೇಕ್ಷರಾಶ್ಚಾಕ್ಷರ ಏವಚ । ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ'' (ಭ.ಗೀ 15–16) ಎಂದರೆ ಪುರುಷರೆಂದು ಕರೆಯಲ್ಪಡುವವರು ಇಬ್ಬರು. ಜನನ ಮರಣಗಳೊಡನೆ ಕೂಡಿ ಸಂಸಾರದಲ್ಲಿರುವ ಜೀವರಿಗೆ 'ಕ್ಷರ' ಎಂದು ಹೆಸರು. ಮುಕ್ತರಾಗಿ ಶುದ್ಧಾತ್ಮರಾದ ಜೀವರಿಗೆ 'ಅಕ್ಷರ' ಎಂದು ಹೆಸರು ಅವರನ್ನು 'ಕೂಟಸ್ಥ' ರೆಂದೂ ಕರೆಯುವರು, ಎಂದು ಸ್ಪಷ್ಟಪಡಿಸಿರುವನು ಒಂದುವೇಳೆ ಇಲ್ಲಿ ಹೇಳಿರುವ 'ಪುರುಷ' ಶಬ್ದವು ಪರಬ್ರಹ್ಮನನ್ನು ಹೇಳುವುದೋ ಎಂಬ ಶಂಕೆಯನ್ನು ನಿವಾರಿಸುವುದಕ್ಕಾಗಿ ಅದರ ಮುಂದಿನ ಶ್ಲೋಕದಲ್ಲೇ "ಉತ್ತಮಃಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ'' (ಭ ಗೀ. 15-17) ಎಂದು ಮೇಲೆ ಹೇಳಿದ ಪುರುಷಶಬ್ದ ವಾಚ್ಯರಿಗಿಂತಲೂ ಬೇರೆಯಾದ ಪರಬ್ರಹ್ಮನನ್ನು 'ಉತ್ತಮ ಪುರುಷ' ನೆಂದು ಹೇಳಿ ಅವನೇ ಈಶ್ವರ, ಪರಮಾತ್ಮ, ಸಮಸ್ತ ಲೋಕವನ್ನೂ ಆಕ್ರಮಿಸಿ ಪಾಲಿಸುತ್ತಿರುವವನು; ಮತ್ತು ಪ್ರಕೃತಿ ಮತ್ತು ಜೀವಾತ್ಮರುಗಳಿಗೆಲ್ಲಾ ಸ್ವಾಮಿ ಎಂದು ಹೇಳಿ 'ಅಕ್ಷರ' ಶಬ್ದವಾಚ್ಯರಾದ ಮುಕ್ತಜೀವರಿಗಿಂತಲೂ ಪರಬ್ರಹ್ಮನು ಬೇರೆಯಾದವನು ಎಂದು ಸ್ಪಷ್ಟಪಡಿಸಿರುವನು. ಮುಕ್ತಜೀವರಿಗಿಂತಲೂ ಪರಬ್ರಹ್ಮನು ಬೇರೆ ಎಂದು ಹೇಳುವುದರಿಂದ ಒಂದು ಪಂಗಡದವರು ಹೇಳುವಂತೆ ಮುಕ್ತಜೀವನು ಬ್ರಹ್ಮವೇ ಆಗುವನು ಎಂಬುದನ್ನು ಈ ಶ್ಲೋಕವು ಖಂಡಿಸುತ್ತದೆ.

ಉಪನಿಷತ್ತುಗಳಲ್ಲೂ ಈ ವಿಷಯವೇ ಸ್ಪಷ್ಟವಾಗಿ ಹೇಳಿರುವುದು. "ಜ್ಞಾಜ್ಞೌ ದ್ವಾವಜಾವೀಶನೀಶೌ" (ಶ್ವೇ 1–9) ಎಂದು ಜ್ಞಾ ಎಂದರೆ ಒಬ್ಬನು (ಎಂದರೆ ಪರಮಾತ್ಮನು) ಸರ್ವಜ್ಞ. ಮತ್ತೊಬ್ಬನು "ಅಜ್ಞ" ಎಂದರೆ ಜೀವಾತ್ಮನು ಅಜ್ಞ ಎಂದರೆ ಜ್ಞಾನಸಂಕೋಚವುಳ್ಳವನು. ಇವರಿಬ್ಬರೂ 'ಅಜಾ' ಎಂದರೆ ಹುಟ್ಟು, ಸಾವುಗಳಿಲ್ಲದವರು ಎಂದರೆ ಶಾಶ್ವತರು. ಇವರಲ್ಲಿ ಒಬ್ಬನು 'ಈಶ' ಎಂದರೆ ಈಶ್ವರ; ಮತ್ತೊಬ್ಬನು 'ಅನೀಶ' ಎಂದರೆ ಈಶ್ವರನಲ್ಲ; ಈಶ್ವರನಿಂದ ಆಳ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಒಡೆಯುವುದು | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಲ್ಪಡುವವನು; ಎಂದು ಹೇಳಿರುವುದು. ಇಲ್ಲಿ ಜೀವಾತ್ಮನು ಪರಮಾತ್ಮನಂತೆಯೇ ಶಾಶ್ವತನು ಎಂದು ಅರ್ಥ. ಹಿಂದೆ ಪ್ರಕೃತಿಯೂ ಪುರುಷರೂ ಅನಾದಿ ಎಂದು ಹೇಳಿದೆವು ಆದರಿಂದ ಪ್ರಕೃತಿಯೂ ಪರಮಾತ್ಮನಂತೆಯೇ ಶಾಶ್ವತವಾದ ವಸ್ತು ಹುಟ್ಟು, ಸಾವು ಇಲ್ಲದ್ದು ಎಂದು ಅರ್ಥವಾಗುವುದು.

ಜೀವಾತ್ಮರು ಅಸಂಖ್ಯಾತರು ಎಂಬುವುದಕ್ಕೆ "ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ ಯೋ ವಿದಧಾತಿ ಕಾಮಾನ್" (ಕಠ 2–5–13) ಎಂದರೆ ನಿತ್ಯನಾದ ಒಬ್ಬ ಚೇತನನು (ಎಂದರೆ ಪರಮಾತ್ಮನು) ನಿತ್ಯರಾದ ಅನೇಕರಾದ ಚೇತನರುಗಳ (ಎಂದರೆ ಜೀವಾತ್ಮರ) ಇಷ್ಟಗಳನ್ನು ಅನುಗ್ರಹಿಸುತ್ತಾನೆ ಎಂಬ ಉಪನಿಷದ್ವಾಕ್ಯವು ಆಧಾರಭೂತವಾದದ್ದು. ಸೃಷ್ಟಿಯ ವಿಷಯವನ್ನು ಹೇಳಿದಾಗ ಹಿಂದೆ "ಅನೇನ ಜೀವೇನಾತ್ಮನಾನು ಪ್ರವಿಶ್ಯ ನಾಮರೂಪೇ ವ್ಯಾಕರವಾಣಿ (ಛಾಂ. 6–3–2) ಎಂದರೆ ಸೃಷ್ಟಿಕಾಲದಲ್ಲಿ ಪರಮಾತ್ಮನು ಅನೇಕರಾದ ಜೀವರುಗಳೊಳಗೆ ಅಂತರ್ಯಾಮಿಯಾಗಿ (ಎಂದರೆ ಆತ್ಮವಾಗಿ) ಪ್ರವೇಶಿಸಿ ನಾಮರೂಪಗಳೊಡನೆ ಗೋಚರಿಸುವ ಈ ದೃಶ್ಯ ಪ್ರಪಂಚವಾಗಿ ಆಗುವನು ಎಂಬ ಶ್ರುತಿ ವಾಕ್ಯದಲ್ಲೂ ಜೀವಾತ್ಮರು ಅನೇಕರು ಎಂಬ ಅರ್ಥವು ವಿಶದವಾಗುವುದು

(ಸಶೇಷ)

ನೃಸಿಂಹ ಜಯಂತಿ ಪ್ರಯುಕ್ತ

# ಅಹೋಬಿಲ ಹಾಗೂ ಆಚಾರ್ಯರು

ಶ್ರೀ ಸಿ. ಗೋವಿಂದಾಚಾರ್ಯ

ಶ್ರೀಮನ್ನಾರಾಯಣನು ತನ್ನ ದಿವ್ಯಾವತಾರಗಳಿಂದ ಆಶ್ರಿತ ವಿರೋಧಿಗಳ ನಿರಸನ ಮತ್ತು ಲೋಕಕಲ್ಯಾಣವೆಂಬ ವ್ಯಾಪಾರವನ್ನು, ತನ್ನ ಸ್ವರೂಪವನ್ನೂ ಸರ್ವಜ್ಞತ್ವ ಮತ್ತು ಸರ್ವಶಕ್ತಿಗಳನ್ನೂ ಬಿಡದೆ ಪ್ರಕಾಶಪಡಿಸುವವನು. ಈ ಅವತಾರಗಳ ಪೈಕಿ ನರಸಿಂಹಾವತಾರ ಬಹು ಜನಪ್ರಿಯವಾದುದು. ನೃಸಿಂಹ ಎಂದರೆ 'ನರಶ್ರೇಷ್ಠ' ಎಂಬ ಹರಿಗುಣವರ್ಣನೆಯೇ ಆಗಿದೆ. ಶುಭಾಶುಭ ಕರ್ಮವೇ ಜನ್ಮಕ್ಕೆ ಕಾರಣ. ಅಶುಭ ಕರ್ಮದಿಂದ ಪರಮಭಕ್ತರಾದ ಜಯವಿಜಯರು ಶಾಪಗ್ರಸ್ತರಾದರು. ಇವರ ಶಾಪವಿಮೋಚನೆಗೆ ನೃಸಿಂಹಾವತಾರ ನಾಂದಿಯಾಯಿತು. ಇವರ ಮುಂದಿನ ಎರಡು ಜನ್ಮಗಳು ವಿಳಂಬವಿಲ್ಲದೆ ಆಗಲು ಹಾಗೂ ಆದಷ್ಟು ಬೇಗ ಹಿರಣ್ಯನ ಸಂಹಾರವಾಗಬೇಕೆಂಬುದೇ ಭಗವದ್ ಸಂಕಲ್ಪವಾಗಿತ್ತು. ಹಿರಣ್ಯನ ಹರಿದ್ವೇಷ ಹಾಗೂ ಪುತ್ರನ ನಡತೆಯ ಬಗ್ಗೆ ವಿರೋಧ ಮತ್ತು ಅಸಮಾಧಾನ- ಈ ಅವತಾರದ ಜೀವಾಳ. ಪರಮಭಕ್ತನಿಗೆ ವಿರೋಧಿಯಾದ್ದರಿಂದ, ಹಿರಣ್ಯ ಪರಮಾತ್ಮನಿಗೂ ಶತ್ರುವಾದ. ಪ್ರಹ್ಲಾದನ ಹರಿನಾಮೋಚ್ಚಾರಣೆ ಇವನಿಗೆ ಕರ್ಣಕಠೋರವಾಗಿತ್ತು. ಇದನ್ನು ಸಹಿಸಲಾಗದೆ ಮಗನಿಗೆ ನಾನಾ ಶಿಕ್ಷೆಗಳನ್ನು ಕೊಟ್ಟರೂ ಭಗವತ್ಕೃಪೆ ಉಂಟಾಗಿ ಬಾಲಕನಿಗೆ ಯಾವ ಆಘಾತವೂ ಆಗುವುದಿಲ್ಲ. ಇವನಿಗೋಸ್ಕರವೇ ಭಗವಂತನು ಅಣುರೇಣು ತೃಣಕಾಷ್ಠಗಳಲ್ಲಿ ಆವರಿಸಿ ಸರ್ವಾಂತರ್ಯಾಮಿಯಾಗಿದ್ದನು. ಇದು ಅವನ ಈಶ್ವರತ್ವವನ್ನೇ ಸೂಚಿಸುವುದು. ಸಮುದ್ರಸಾಗರಗಳು ಕುದಿಯುವಂತಹ ಇವನ ಕೋಪವು ಶ್ರೀ. ಬ್ರಹ್ಮಾದಿಗಳನ್ನು ತಲ್ಲಣಿಸಿತು. ಪ್ರಹ್ಲಾದನನ್ನು ಕಂಡೊಡನೆ ಕೋಪವೆಲ್ಲ ಶಮನವಾಗಿ ಸ್ವಾಮಿಯು ಶಾಂತಪ್ರಸನ್ನನಾದನು. "ಇಂತಹ ಮಹಾಭಾಗವತನಾದ ಪ್ರಹ್ಲಾದನು ಎಲ್ಲಿಯಾದರೂ ಕಂಡುಬರುವನೋ ? ಎಂದು ಅಹೋಬಿಲದ ಪ್ರತಿಯೊಂದು ಕಂಭದಲ್ಲಿ ಭಗವಂತನು ಕಾದು ಕುಳಿತಿರುವನು" ಎಂದು ಮುಕ್ಕೂರು ಸ್ವಾಮಿಗಳು ಅಪ್ಪಣೆ ಕೊಡಿಸುವರು. "ಹಿರಣ್ಯನನ್ನು ಸಂಹರಿಸಿದ್ದು ಹರಿಗೆ ತಲೆಬಾಗಲಿಲ್ಲವೆಂದಲ್ಲ, ಕಂದನನ್ನು ಹಿಂಸೆ ಮಾಡಿದ್ದರಿಂದ" ಎಂದು ಕೂರೇಶರು ಹೇಳುವರು. ಆದ್ದರಿಂದ "ಪ್ರಹ್ಲಾದಾರ್ಥೇ ನೃಸಿಂಹಃ" – ಒಂದು ಶಿಶುವಿಗಾಗಿ ಈ ಅವತಾರವಾಯಿತು. ಈ ಅವತಾರದಿಂದ ಪ್ರಹ್ಲಾದನ ವಾಕ್ಯ ಸತ್ಯವಾಯಿತು. ಹಿರಣ್ಯನ ಅರಮನೆಗೂ, ಸ್ತಂಭಕ್ಕೂ ಮತ್ತು ಆ ಅದ್ಭುತ ನಖಗಳಿಗೂ ಮಹಾತ್ಮೆ ಉಂಟಾಯಿತು. ಅಸುರನು ಮಹಾಸುರನಾದನು. ಹಸ್ತಸ್ಪರ್ಶ ಮತ್ತು ದ್ವೇಷಪೂರಿತವಾದ ಹೃದಯವನ್ನು ಸೀಳಿ ಕರುಳನ್ನೇ ಮಾಲೆಯಾಗಿ ಧರಿಸುವುದು ಭಗವದನುಗ್ರಹವೇ ಹೊರತು ನಿಗ್ರಹವಲ್ಲ. 'ಪ್ರಹ್ಲಾದ ಪರಿಪಾಲನೆ' ಎಂಬ ಚರಿತ್ರೆಯ ಪಠನ ಮತ್ತು ಶ್ರವಣ – ಎರಡೂ ಪಾವನವಾದುದು. ಇದೊಂದು ಮೋಕ್ಷಸಾಧನೆಯೇ ಆಗಿದೆ. ಇಂತಹ ದಿವ್ಯಾವತಾರವಾದ ಸ್ಥಳವೇ ಅಹೋಬಿಲ. ಬ್ರಹ್ಮಾಂಡ ಪುರಾಣದಲ್ಲಿ ಇದರ ಉಲ್ಲೇಖವಿದೆ. ತಿರುಮಂಗೈಯಾಳ್ವಾರರು "ಪುನಿದನ್ ಇಡಂ ಶೆಂಗಣ್ ಆಳಿ ಇಟ್ಟು, ಇದೃಂಜಂ ಶಿಂಗವೇಳ್‌ಕುನ್ರಂ" ಎಂದು ಪೆರಿಯತಿರುಮೊಳಿಯಲ್ಲಿ ಹೇಳಿದ್ದಾರೆ. ಅಂದಮೇಲೆ ಭೂಲೋಕದಲ್ಲಿ ಅರ್ಚಾಮೂರ್ತಿಯಾಗಿ ನೆಲೆಸಬೇಕೆಂಬುದೇ ಈ ಅವತಾರದ ಇನ್ನೊಂದು ಸಂಕಲ್ಪವಾಗಿತ್ತು. ಆದ್ದರಿಂದಲೇ ಈ ಕ್ಷೇತ್ರದಲ್ಲಿ ಭಗವಂತನು ನವನಾರಸಿಂಹ ಮೂರ್ತಿಯಾಗಿ ನೆಲೆಸಿದ.

ನೃಸಿಂಹಕ್ಷೇತ್ರಗಳು ದಕ್ಷಿಣಭಾರತದಲ್ಲಿ ಹೆಚ್ಚಾಗಿವೆ. ಕರ್ನಾಟಕದಲ್ಲಿ ಮೇಲುಕೋಟೆ, ಟಿ. ನರಸಿಪುರ, ದೇವರಾಯನದುರ್ಗ, ನುಗ್ಗೇಹಳ್ಳಿ, ಮದ್ದೂರು, ಸಾಲಗ್ರಾಮ, ಕ್ಷೇತ್ರಗಳು ಪ್ರಧಾನವಾದವು. ಕಾರ್ತೀಕ ಮಾಸ ಬಂತೆಂದರೆ ತಮಿಳುನಾಡಿನ ಚೋಳಸಿಂಹಪುರದ ಯೋಗಾ ನೃಸಿಂಹ ಕ್ಷೇತ್ರದಲ್ಲಿ ಎಲ್ಲಿಲ್ಲದ ಸಂಭ್ರಮ ಸಡಗರ. ಈ ಕಾಲದಲ್ಲಿ ಸ್ವಾಮಿ ತನ್ನ ನೇತ್ರಗಳನ್ನು ತೆರೆದಿರುವನೆಂದು ಪ್ರತೀತಿ. 'ನರಸಿಂಹ ನನ್ನು ಬ್ರೋವ' ಎಂದು ತ್ಯಾಗರಾಜರು ಹಾಡಿದ್ದಾರೆ. ನರಸಿಂಹಸ್ವರೂಪ ಅಪೇಕ್ಷಿಸುವ ನೃಸಿಂಹಪ್ರಿಯರಿಗೆ ತಂಜಾವೂರಿನ ತಂಜೈಮಣಿಕ್ಕೋಯಿಲ್‌ನ ವೀರನರಸಿಂಹಸ್ವಾಮಿ ಕ್ಷೇತ್ರ ಒಂದು ಅಪೂರ್ವ ಅವಕಾಶ. ಕಂಚಿ, ಕುಂಭಕೋಣಗಳಲ್ಲಿ ಸುದರ್ಶನ ಮೂರ್ತಿಯ ಹಿಂಭಾಗದಲ್ಲಿ ನರಸಿಂಹಮೂರ್ತಿಯನ್ನು ನೋಡಬಹುದು. ಶ್ರೀಧರ, ವರಾಹ ಮತ್ತು ನೃಸಿಂಹ– ಇವುಗಳ ದಿಗ್‌ಮೂರ್ತಿಗಳು ರಾಜಗೋಪುರದಲ್ಲಿರಬೇಕೆಂದು ಭಗವಚ್ಛಾಸ್ತ್ರಗಳು ಹೇಳುವವು. ಗೋಪುರದ ಒಂದು ಭಾಗದಲ್ಲಿ ಹಿರಣ್ಯನೊಡನೆ ಯುದ್ಧ ಮಾಡುತ್ತಿರುವುದು, ಹಿರಣ್ಯನ ಸಂಹಾರ, ಲಕ್ಷ್ಮೀನೃಸಿಂಹ ಮತ್ತು ಯೋಗಾನೃಸಿಂಹರ ದಿಗ್‌ಮೂರ್ತಿಗಳನ್ನು ಕ್ರಮವಾಗಿ ಹಂತಹಂತವಾಗಿ ನೋಡಬಹುದು. ಆಂಧ್ರಪ್ರದೇಶದಲ್ಲಿ ಸಿಂಹಾಚಲ, ಮಂಗಳಗಿರಿ, ಯಾದಗಿರಿ, ಕದಿರಿ ಮತ್ತು ಅಹೋಬಿಲ ಮುಖ್ಯಕ್ಷೇತ್ರಗಳು. ಸಮಗ್ರ ಭಾರತದ ಎಲ್ಲಾ ನೃಸಿಂಹ ಕ್ಷೇತ್ರಗಳ ಪೈಕಿ ಕರ್ನೂಲ್ ಜಿಲ್ಲೆಯ ಆಳ್ಳಗಡ್ಡ ತಾಲ್ಲೂಕಿನಲ್ಲಿರುವ ಅಹೋಬಿಲ (ಗರುಡಾಚಲ) ಕ್ಷೇತ್ರವೇ ಪ್ರಧಾನವಾದುದು. ಆಳ್ಳಗಡ್ಡ ತಲುಪುತ್ತಲೇ ಅಹೋಬಿಲದ ಬೆಟ್ಟದ ಸಾಲು ಗೋಚರವಾಗುವುದು.

ಅಹೋಬಲ – ಅಹೋಬಿಲ :– ಅಹೋಬಲ ಎಂದರೆ ಭಗವಂತನ ಅಖಂಡ ಶಕ್ತಿಸಾಮರ್ಥ್ಯಗಳನ್ನು ಸೂಚಿಸುವ ಷಾಡ್ಗುಣ್ಯ ವರ್ಣನೆಯೇ ಆಗಿದೆ. ಅಹೋಬಿಲ ಎಂದರೆ 'ದೊಡ್ಡ ಗುಹೆ' ಎಂದು ಅರ್ಥ. ಬಳಕೆಯಲ್ಲಿರುವುದು ಈ ಪದವೇ. ಬೃಹದಾಕಾರವಾದ ಒಂದೇ ಬಂಡೆಯಲ್ಲಿ ಒಂದು ದೊಡ್ಡ ಗುಹೆ ಏರ್ಪಟ್ಟಿದೆ. ಇದರಲ್ಲಿ ಹಿರಣ್ಯನನ್ನು ಸಂಹರಿಸುತ್ತಿರುವ ಉಗ್ರ ನರಸಿಂಹಮೂರ್ತಿ ಇದೆ. ಎಲ್ಲಾ ದಿವ್ಯಕ್ಷೇತ್ರಗಳ ಪೈಕಿ ಇದು ಬಹಳ ಕಿರಿದಾದ ಮೂಲಮೂರ್ತಿ. ಅಹೋಬಿಲ ನೃಸಿಂಹ ಎಂದರೆ ಇದಕ್ಕೆ ಅನ್ವಯಿಸುವುದು (ಮೇಲಿನ ಅಹೋಬಿಲ). ಗುಹೆಗೆ ಸೇರಿದಂತೆ ಒಂದು ಪ್ರಾಕಾರವಿದೆ. ಉಬ್ಬಗಲದ ನಾಜೂಕಾದ ರಸ್ತೆಯ ಕೊನೆಯಲ್ಲಿ ಒಂದು ಮಂಟಪವಿದೆ. ದೇವಸ್ಥಾನದ ಮುಂಭಾಗದಲ್ಲಿ 'ಭವನಾಶಿನಿ' ಹರಿಯುವುದು. 'ಗಜಕುಂಡ' ಎಂಬ ಸಣ್ಣ ಜಲಪಾತವನ್ನು ನೋಡಬಹುದು.

ಸಕಲಂ ನೃಸಿಂಹ :– ನೃಸಿಂಹಮಯವಾದ ಅಹೋಬಿಲದಲ್ಲಿ ಜ್ವಾಲ, ಉಗ್ರ, ಭಾರ್ಗವ, ವರಾಹ, ಯೋಗಾನಂದ, ಛತ್ರವಟ, ಕಾರಂಜ, ಪಾವನ ಮತ್ತು ಮಾಲೋಲ ಎಂಬ ನವನಾರಸಿಂಹ ಮೂರ್ತಿಗಳಿವೆ. ಇವುಗಳಲ್ಲಿ ಮೊದಲನೆಯ ನಾಲ್ಕು ಉಗ್ರರೂಪದಲ್ಲಿದೆ, ಮುಂದಿನ ಎರಡು ಯೋಗರೂಪದಲ್ಲಿವೆ ಮತ್ತು ಕೊನೆಯ ಮೂರು ಶಾಂತಪ್ರಸನ್ನ ಮೂರ್ತಿಗಳು. ಕಾರಂಜ ನರಸಿಂಹ ಶಾರ್ಙ್ಗಪಾಣಿಯಾಗಿದ್ದಾನೆ. ಒಂದೇ ದಿನದಲ್ಲಿ ಒಂಭತ್ತು ಕ್ಷೇತ್ರಗಳನ್ನು ಸೇವೆ ಮಾಡಿದರೆ ಪುಣ್ಯಲಾಭವೆಂದು ಪುರಾಣ ಐತಿಹ್ಯವಿದೆ. ಹಿಂದೆ ಒಬ್ಬ ರಾಜನು ಪಲ್ಲಕ್ಕಿಯಲ್ಲಿ ಕುಳಿತು ಒಂದೇ ದಿನದಲ್ಲಿ ಒಂಭತ್ತು ಕ್ಷೇತ್ರಗಳನ್ನು ಸೇವೆ ಮಾಡಿಬಂದನು. ಅವನ ಪುಣ್ಯ ಸಂಪಾದನೆಯಲ್ಲಿ ಪಲ್ಲಕ್ಕಿ ಹೊತ್ತ ಬೋಯಿಗಳೂ ಭಾಗಿಯಾದರು ಎಂಬುದಂತ ಕಥೆ ಯೊಂದಿದೆ. ಈ 9 ಕ್ಷೇತ್ರಗಳು

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12-00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ದುರ್ಗಮವಾದ ಗುಡ್ಡಗಾಡು ಪ್ರದೇಶದಲ್ಲಿ ಬೇರೆ ಬೇರೆ ಕಡೆ ಇರುವುದರಿಂದ ಅವುಗಳು ಅಷ್ಟು ಸುಲಭವಾಗಿ ಎಟುಕುವಂಥಾದ್ದಲ್ಲ. ಸಂಚಾರ ಸೌಕರ್ಯಗಳಷ್ಟಾಗಿಲ್ಲ. ಕಾಲುನಡಿಗೆಯಲ್ಲಿ ಹೋಗಬೇಕು ಮತ್ತು ಸ್ಥಳೀಯರ ಸಹಾಯವೂ ಬೇಕು.

ಕೆಳಗಿನ ಅಹೋಬಿಲದ ಪ್ರಹ್ಲಾದವರದ ನರಸಿಂಹ ಕ್ಷೇತ್ರ ಬಹು ಮುಖ್ಯವಾದುದು. ಈ ಮೂರ್ತಿಯ ವಿಶೇಷವೇನೆಂದರೆ, ಲಕ್ಷ್ಮಿ ಮತ್ತು ನರಸಿಂಹ ಪರಸ್ಪರ ಆಲಿಂಗನ ಭಂಗಿಯಲ್ಲಿರುವುದು. ಇಂತಹ ಅರ್ಚಾಮೂರ್ತಿಯು ಭಾರತದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಪ್ರಭಾವಳಿಯಲ್ಲಿ ದಶಾವತಾರ ಚಿತ್ರವಿದೆ. ಇಲ್ಲಿಯ ಉತ್ಸವಮೂರ್ತಿ ಉಭಯದೇವಿಯರ ಸಮೇತ ಪ್ರಹ್ಲಾದವರದ. ಇದರ ಜೊತೆಗೆ ಗೋಪಾಲಕೃಷ್ಣ ಮತ್ತು ಆದಿವಣ್ ಸ್ವಾಮಿಗಳ ವಿಗ್ರಹಗಳಿರುವುದು. ಸ್ವಲ್ಪಕಾಲ ಇತರ 8 ಕ್ಷೇತ್ರಗಳ ಉತ್ಸವ ಮೂರ್ತಿಗಳನ್ನು ಇಲ್ಲಿಡಲಾಗಿತ್ತು. ಭದ್ರತಾ ಸಮಸ್ಯೆಯಿಂದಾಗಿ ಇವುಗಳನ್ನು ಖಜಾನೆಯಲ್ಲಿಡಲಾಗಿದೆ. ವಿಶೇಷ ದಿನಗಳಲ್ಲಿ ಇವುಗಳನ್ನು ತರಲಾಗುವುದು. ಎಲ್ಲ ಉತ್ಸವಮೂರ್ತಿಗಳು ಶ್ರೇಷ್ಠ ಕಲಾ ನೈಪುಣ್ಯತೆಯಿಂದ ಕೂಡಿ ಸುಂದರವಾಗಿವೆ. ಇವುಗಳ ಪೈಕಿ ಹಿರಣ್ಯನನ್ನು ಸಂಹರಿಸುತ್ತಿರುವ ಅಷ್ಟ ಭುಜಗಳುಳ್ಳ ಜ್ವಾಲಾನೃಸಿಂಹಮೂರ್ತಿ ಒಂದು ವಿಶೇಷ. ಇಲ್ಲಿ ರಥೋತ್ಸವವಿಲ್ಲ. ಕುಂಭ-ಪಾಲ್ಗುಣ ಮಾಸಗಳಲ್ಲಿ ಬ್ರಹ್ಮೋತ್ಸವ ಜರುಗುವುದು. ಗರುಡನಿಗೆ ಭಗವತ್ಸಾಕ್ಷಾತ್ಕಾರವಾದ್ದರಿಂದ ಗರುಡಸೇವೆಯೇ ಪ್ರಧಾನವಾದ ಬ್ರಹ್ಮೋತ್ಸವ. ರಾಜಬೀದಿಯಲ್ಲಿ ಮೊದಲು ಗೋಚರವಾಗುವುದು ಅಹೋಬಿಲ ಮಠ. ನಂತರ ರಾಜಗೋಪುರ, ಒಳಪ್ರಾಕಾರ, ಶತಸ್ತಂಭ ಮಂಟಪ, ನವನಾರಸಿಂಹ ಮೂರ್ತಿ ಚಿತ್ರಗಳು, ಯಾಗಶಾಲೆ, ಶ್ರೀನಿವಾಸ ಕಲ್ಯಾಣ ಮಂಟಪ, ಪ್ರತ್ಯೇಕವಾಗಿ ತಾಯಾರ್, ಶ್ರೀರಾಮ, ಆಂಡಾಳ್, ಭಾಷ್ಯಕಾರರು ಮತ್ತು ದೇಶಿಕರ ಸನ್ನಿಧಿಗಳಿವೆ, ದೇವಸ್ಥಾನದ ಬಲಭಾಗದಲ್ಲಿ ಪುಷ್ಕರಿಣಿ ಇದೆ. ಮತ್ತು ಎದುರುಗಡೆ ತಿ.ತಿ ದೇ. ಛತ್ರವಿದೆ.

ಆಳ್ವಾರರು :– ಕವಿ ಕಲಿಯನರು ಬದರಿಯಿಂದ ತಿರುವನಂತಪುರದವರೆಗೆ 86 ದಿವ್ಯಕ್ಷೇತ್ರಗಳಲ್ಲಿ ಮಂಗಳಾಶಾಸನ ಮಾಡಿದ್ದಾರೆ. ಆಳ್ವಾರುಗಳ ಪೈಕಿ ಇವರೊಬ್ಬರೆ ಅಹೋಬಿಲವನ್ನು ಸಂದರ್ಶನ ಮಾಡಿ ಹಾಡಿರುವುದು. ಇವರ 'ಪೆರಿಯತಿರುಮೊಳಿಯ' ಮೊದಲ್ ಪತ್ತನಲ್ಲಿ 7ನೆ ಉಪವಿಭಾದ ಶಿಂಗವೇಳ್‌ಕುನ್ರಂ ಎಂಬ 10 ಪದ್ಯಗಳು ಅಹೋಬಿಲ ಕ್ಷೇತ್ರವನ್ನು ಕುರಿತದ್ದು. ಈ 10 ಪದ್ಯಗಳಲ್ಲಿ ಈ ಕೆಳಕಂಡ ಅಂಶಗಳು ಸ್ಪಷ್ಟವಾಗುವುದು.

1. ಈ ಕ್ಷೇತ್ರ ಎಂತಹ ಪರಿಸರದಿಂದ ಕೂಡಿದೆ ಎಂದರೆ (ಎ) ಬಿಸಿಲಿನಲ್ಲಿ ಕೆಂಡದಂತೆ ಕಾದ ಕಲ್ಲು ಬಂಡೆಗಳು, ಇವುಗಳ ಮಧ್ಯೆ ಮುಳ್ಳುಗಿಡ, ನೆಲ್ಲಿ ಮತ್ತು ಬಿದಿರು ಮರಗಳು, ಇವುಗಳು ಒಂದಕ್ಕೊಂದು ಉಜ್ಜಿದಾಗ ಬೆಂಕಿ ಉಂಟಾಗಿ ಆ ಸುಡು ಗಾಳಿಯ ಬೆಂಕಿಯು ಆಕಾಶಕ್ಕೆಲ್ಲಾ ವ್ಯಾಪಕವಾಗಿ ಸ್ವಾಮಿಯ ಕೋಪದಂತೆ ಕೆಂಪಾಗಿ ಕಂಡು ಬರುವುದು. (ಬಿ) ಕ್ರೂರಮೃಗಗಳ ಸಂಚಾರ. (ಸಿ) ಬೇಡರ ಬಿಡಾರಗಳು (ಚೆಂಚುಲಕ್ಷ್ಮಿ ವೃತ್ತಾಂತ).

2. ಆದ್ದರಿಂದ ದೇವತೆಗಳನ್ನು ಬಿಟ್ಟರೆ ಮತ್ತಾರೂ ಹತ್ತಿರ ಹೋಗುವುದಕ್ಕಾಗದ ಕ್ಷೇತ್ರವಿದು. 'ತೇಯುಮನ್ ಅಲ್ಲಾಲ್ ಶೆಲ್ಲವೊಣ್ಣಾ'– ಅಂದರೆ ಎಲ್ಲರಿಗೂ ಅಹೋಬಿಲ ಕ್ಷೇತ್ರ ದುರ್ಲಭ ಎಂಬ ಗೂಢಾರ್ಥವಿದೆ

3. ನೃಸಿಂಹ ಮೂರ್ತಿಯ ವಿಭವ–ಅರ್ಚಾ ವರ್ಣನೆ–ಕೆಂಪಾದ ಕಣ್ಣುಗಳು, ದೊಡ್ಡ ಬಾಯಿ, ಕತ್ತಿಯಂತೆ ಇರುವ ಕೋರೆಹಲ್ಲು, ಚಾಚಿದ ನಾಲಗೆ, ನಖಗಳು–ಆಯುಧವಿಲ್ಲದೆ ನಖಗಳಿಂದಲೇ ಸಂಹಾರವಾಯ್ತು. 'ಅಹಂವಲ್ ಉಹಿರಾಲ್ ವಹಿರ್‌ನ್ದ–4' ಮತ್ತು ದಿವ್ಯದಂಪತಿಗಳು ಸರಸ್ಪರ ಆಲಿಂಗನ ಮಾಡಿಕೊಂಡಿರುವುದು. 'ಅಳ್ಳಿಮಾದರ್ ಪುಲಹನಿನ್ರ–9'. ಆದರೆ ನವಮೂರ್ತಿಗಳ ವರ್ಣನೆ ಈ ಪದ್ಯದಲ್ಲಿ ಕಂಡು ಬರುವುದಿಲ್ಲ.

4. ಈ ಪದ್ಯಗಳ ಮುಖ್ಯ ಸಾರಾಂಶ 'ನಾವು ಈ ಕ್ಷೇತ್ರದಲ್ಲಿದ್ದು ಸೇವಿಸಿ ಬದುಕೋಣ' ಎಂಬ ಲೋಕೋಕ್ತಿ. 'ನಾಮ್ ತೊಳುದುಂ–9'. ದಾಸ ಸಾಹಿತ್ಯದಲ್ಲಿಯೂ ಅಹೋಬಿಲದ ಉಲ್ಲೇಖವಿದೆ. ಪುರಂದರದಾಸರು, ಗೋಪಾಲದಾಸರು ಅನ್ನಮಾಚಾರ್ಯರು ತಮ್ಮ ಕೃತಿಗಳಲ್ಲಿ ಅಹೋಬಿಲ ನೃಸಿಂಹನನ್ನು ಅನುಪಮವಾಗಿ ಸ್ತುತಿಸಿ ಕೊಂಡಾಡಿದ್ದಾರೆ.

ಆಚಾರ್ಯರು :– ಆಚಾರ್ಯ ಪರಂಪರೆಯಲ್ಲಿ ಅಹೋಬಿಲವನ್ನು ಸಂದರ್ಶಿಸಿದವರಲ್ಲಿ ನಾಥಮುನಿಗಳು ಮೊದಲಿಗರು. ನಂತರ ರಾಮಾನುಜರು ಮತ್ತು ವೇದಾಂತದೇಶಿಕರು. ಶ್ರೀ ವೈಷ್ಣವ ಮತ ಚರಿತ್ರೆಯಲ್ಲಿ ಬ್ರಹ್ಮತಂತ್ರ ಮಠ (ಈಗಿನ ಪರಕಾಲಮಠ), ಅಹೋಬಿಲ ಮಠ ಮತ್ತು ವಾನಮಾಮಲೆ ಮಠಗಳು ಅಸ್ತಿತ್ವಕ್ಕೆ ಬಂದಿದ್ದು ದೇಶಿಕರ ಕಾಲದಲ್ಲಿ. 14 ನೆ ಶತಮಾನದಲ್ಲಿ ಅಹೋಬಿಲ ಮಠ ಸ್ಥಾಪಿತವಾಯಿತು. ನವ ಮೂರ್ತಿಗಳಲ್ಲೊಂದಾದ ಮಾಲೋಲ ನೃಸಿಂಹ ಮೂರ್ತಿಯೇ ಈ ಮಠದ ಆರಾಧ್ಯ ದೈವ. ಇದರ ಜೊತೆಗೆ 108 ದಿವ್ಯದೇಶಗಳ ವಿಗ್ರಹಗಳು. ಪರಂಪರೆಯ 43 ಯತಿಗಳ ವಿಗ್ರಹಗಳು, ಸಾಲಿಗ್ರಾಮ ಶಿಲೆಗಳು (ಪ್ರತ್ಯೇಕ ಬೆಳ್ಳಿ ಪೆಟ್ಟಿಗೆಯಲ್ಲಿ) ಮತ್ತು ಕೃಷ್ಣಮಂತ್ರದ ಬೀಜಾಕ್ಷರಗಳು ವ್ಯಾಪಿಸಿರುವ ಸುಂದರನಾಟ್ಯ ಕೃಷ್ಣವಿಗ್ರಹ – ಇವುಗಳೆಲ್ಲವನ್ನೂ ಒಂದು ರಜತ ಮಂಟಪದಲ್ಲಿಡಲಾಗಿದೆ (39 ನೆಯ ಸ್ವಾಮಿಗಳ ಕೊಡುಗೆ) ಅನೇಕ ಸಾಮಂತರುಗಳು ಸಮರ್ಪಿಸಿರುವ ಛತ್ರಿ, ಚಾಮರ, ನಗಾರಿ, ಪಲ್ಲಕ್ಕಿ ದೀವಟಿಗೆ ಇತ್ಯಾದಿ ಉಪಚಾರ ವಸ್ತುಗಳು ಮರ್ಯಾದೆಗಳೂ ಇವೆ. ಈ ಪರಂಪರೆಯ ಯತಿಗಳಿಗೆ 'ಆದಿವಣ್ ಶಠಕೋಪ' ಎಂಬ ಬಿರುದಿದೆ. ಅಂದ ಮೇಲೆ ಈ ಮಠಕ್ಕೂ ಮತ್ತು ಆಳ್ವಾರ್ ತಿರುನಗರಿ ಕ್ಷೇತ್ರಕ್ಕೂ ನಿಕಟ ಸಂಪರ್ಕ ಮತ್ತು ಚಾರಿತ್ರಿಕ ಹಿನ್ನೆಲೆ ಇದೆ ಎಂದು ಸ್ಪಷ್ಟವಾಗುವುದು. ದೇಶಿಕ ಸಂಪ್ರದಾಯವನ್ನು ಅನುಸರಿಸುವುದರಿಂದ 'ಮಹಾದೇಶಿಕ' ಎಂಬ ಕೊನೆಯ ಹೆಸರೂ ಇದೆ. ಇಲ್ಲಿಯ ಸ್ವಾಮಿಗಳಿಗೆ 'ಅಳಹಿಯ ಶಿಂಗರ್' ಎಂದು ಹೆಸರು. ಇವರು ನೃಸಿಂಹನ ಪ್ರತಿನಿಧಿ ಎಂದು ಭಾವನೆ. ರಜತ ಸಿಂಹಾಸನವೂ ಇದೆ. ಪತ್ರ ವ್ಯವಹಾರಗಳಲ್ಲಿ 'ಶರಣೇಪಶ್ರೀ' ಎಂದು ಬರೆಯಲಾಗುವುದು. ಸನ್ಯಾಸ ದೀಕ್ಷೆಯನ್ನು ನರಸಿಂಹನೇ ಸನ್ನಿಧಿಯಲ್ಲಿ ಕೊಡುವನು ಎಂಬ ಐತಿಹ್ಯವು ಒಂದನೆ ಸ್ವಾಮಿಗಳಾದ ಆದಿವಣ್ ಶ್ರೀನಿವಾಸ ಶಠಕೋಪ ಮಹಾದೇಶಿಕರಿಂದ ಏರ್ಪಟ್ಟಿದೆ. ಇವರು ತಿರುನಾರಾಯಣಪುರದವರು. ಇವರ ಕಾಲದಲ್ಲಿ– (1) ಅಹೋಬಿಲ ಮಠ ಸ್ಥಾಪನೆ (2) ಶ್ರೀರಂಗದಲ್ಲಿ ದಶಾವತಾರ ಸನ್ನಿಧಿ ನಿರ್ಮಾಣ, (3) ದಿವ್ಯದೇಶಗಳ ದಿಗ್ವಿಜಯ ಯಾತ್ರೆ, ಮತ ಪ್ರಸಾರ, ವಾದಸರಣಿಯಲ್ಲಿ ಜಯ, ಕಾಲಕ್ಷೇಪ, ಪಂಚಸಂಸ್ಕಾರ–ಇತ್ಯಾದಿ ಸತ್ಕ್ರಿಯೆಗಳು ನಡೆದಿವೆ. ಇವರು ಬೃಂದಾವನಸ್ಥರಾದದ್ದು ಮೇಲುಕೋಟೆಯಲ್ಲಿ. ಇವರ ನಂತರ ಬಂದ ಯತಿವರ್ಯರು ಪರಾಂಕುಶ, ನಾರಾಯಣ, ಶ್ರೀನಿವಾಸ, ವೀರರಾಘವ, ಎಂಬ ಹೆಸರಿನಲ್ಲಿ ಪ್ರಖ್ಯಾತರಾಗಿ ಹಿರಿಯ ಆಚಾರ್ಯರ ಮಾರ್ಗವನ್ನೇ ಅನುಸರಿಸಿ ಉಪಕರಿಸಿದ್ದಾರೆ. ಇವರೆಲ್ಲರೂ ತಮ್ಮ ಸಂನ್ಯಾಸ ಜೀವನದಲ್ಲಿ ಭೀಕರ ರಾಜಕೀಯ ಪರಿಸ್ಥಿತಿಯನ್ನು ಎದುರಿಸಿ ಪಾರಾಗಿದ್ದಾರೆ. ಮೈಸೂರು–ವಿಜಯನಗರದ ರಾಜಾಶ್ರಯವು ದೊರೆತಿದೆ. ದೇವಸ್ಥಾನ ನಿರ್ಮಾಣ ಮತ್ತು ಮಠದ ಶಾಖೋತ್ಪತ್ತಿ, ಯತಿಗಳ ಇನ್ನೊಂದು ಕೊಡುಗೆ ಮತ್ತು ಸಾಧನೆ. ಶ್ರೀರಂಗದಲ್ಲಿರುವ ದೇಶಿಕರ ಸನ್ನಿಧಿ ಮತ್ತು ತಿರುವಳ್ಳೂರ್ ದೇವಸ್ಥಾನ ಈ ಮಠಾಡಳಿತಕ್ಕೆ ಒಳಪಟ್ಟಿದೆ. ಸಮಗ್ರಭಾರತದಲ್ಲಿ ಒಟ್ಟು 80 ಶಾಖೆಗಳಿವೆ.

44 – ಮುಕ್ಕೂರ್ ಅಳಹಿಯ ಶಿಂಗರ್ :– ಮುಕ್ಕೂರ್, ಕಂಚಿಯ ಹತ್ತಿರವಿರುವ ಒಂದು ಸಣ್ಣ ಹಳ್ಳಿ. ಅಲ್ಲಿ ಭಾರದ್ವಾಜಗೋತ್ರಜರಾದ ಶ್ರೀರಂಗನಾಥಾಚಾರ್ಯ ಮತ್ತು ಅವರ ಧರ್ಮಪತ್ನಿ ರಂಗನಾಯಕಿ ಅಮ್ಮಾಳ್ ಎಂಬ ಸಾತ್ವಿಕ ದಂಪತಿಗಳಿಗೆ 1893 ಶ್ರಾವಣಮಾಸ ಹಸ್ತ ನಕ್ಷತ್ರದಂದು 'ರಾಜಗೋಪಾಲ' ಎಂಬ ಪುತ್ರ ರತ್ನ ಜನನವಾಯಿತು. ಇವರು ಬಾಲ್ಯದಿಂದಲೇ ಪ್ರತಿಭಾನ್ವಿತರಾಗಿಯೂ ಮತ್ತು ಅಪೂರ್ವವಾದ ಬುದ್ಧಿ ಶಕ್ತಿಯನ್ನುಳ್ಳವರಾಗಿದ್ದರು. ಸಕಾಲದಲ್ಲಿ ಜಾತಕರ್ಮ, ನಾಮಕರಣ, ಚೌಲೋಪನಯನಾದಿಗಳು ನಡೆದವು. 40 ನೇ ಸ್ವಾಮಿಗಳಾದ ಕಾರಕುರ್ಚಿ (ಪೆರಿಯ) ಅಳಹಿಯ ಶಿಂಗರಿಂದ ಭರನ್ಯಾಸ, 41 ನೆಯವರಾದ ಲಕ್ಷ್ಮೀನೃಸಿಂಹ ಶಠಗೋಪರಿಂದ ಚಕ್ರಾಂಕನ, 'ತರ್ಕಸಿಂಹ' ಇಂಜಿಮೇಡು ಸ್ವಾಮಿಗಳ ಹತ್ತಿರ (42 ನೆಯವರು) ಕಾಲಕ್ಷೇಪವಾಗಿ ತರ್ಕವೇದಾಂತ ಶಾಸ್ತ್ರ ಮತ್ತು ವ್ಯಾಕರಣಗಳಲ್ಲಿ ಉನ್ನತ ಪಾಂಡಿತ್ಯವನ್ನು ಮತ್ತು ಶಿರೋಮಣಿ ಪದವಿಯನ್ನು ಹೊಂದಿದರು. 1957 ರ ವರೆಗೆ ಮುಕ್ಕೂರ್ ರಾಜಗೋಪಾಲಾಚಾರ್ಯರು ಲೌಕಿಕ–ವೈದಿಕ ಚರಿತ ಜೀವನವನ್ನು ಸಾಗಿಸಿದರು. 1957 ರಲ್ಲಿ 43 ನೆಯವರಾದ ದೇವನಾರ್ ವಿಳಾಹಂ (ವೀರರಾಘವ ಶಠಗೋಪ) ಸ್ವಾಮಿಗಳಿಂದ ನೈಮಿಷಾರಣ್ಯದಲ್ಲಿ ತುರೀಯಾಶ್ರಮ ಸ್ವೀಕಾರ. ಹಿಂದಿನ ಸ್ವಾಮಿಗಳ ಬಗ್ಗೆ ಅತಿ ಹೆಚ್ಚಿನ ಪ್ರತಿಪತ್ತಿ ಉಂಟಾಗಿ ನೈಮಿಶಾರಣ್ಯದಲ್ಲಿ 42 ಮತ್ತು 43ನೆ ಸ್ವಾಮಿಗಳ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿ ಯಾತ್ರಾರ್ಥಿಗಳಿಗೆ ವಸತಿ ಸೌಕರ್ಯಗಳನ್ನು ಒದಗಿಸಿದರು ಮತ್ತು ಮಧುರಾಂತಕಂನಲ್ಲಿ ಸಂಸ್ಕೃತ ಪಾಠಶಾಲೆಯನ್ನು ಅಭಿವೃದ್ಧಿಗೊಳಿಸಿ ಪ್ರೌಢಶಾಲೆಯನ್ನು ಸ್ಥಾಪಿಸಿದರು. ಅಹೋಬಿಲದ ಮಠಚರಿತ್ರೆಯಲ್ಲಿ ಯಾರೂ ಮಾಡದ ಅನೇಕ ದೇವತಾಕಾರ್ಯಗಳನ್ನು ಮಾಡಿ ಜನಪ್ರಿಯರಾಗಿದ್ದಾರೆ. ಅವರು ಮಾಡಿದ ಈ ಕೆಳಕಂಡ ಸತ್ಕ್ರಿಯೆಗಳನ್ನು ಎಲ್ಲರೂ ಸ್ಮರಿಸಬೇಕಾದ್ದು:– (1) ನೃಸಿಂಹ ಮೂರ್ತಿಗೆ ಸಹಸ್ರ ಕಲಶಾಭಿಷೇಕ (2) ರಜತಮಂಟಪದ ನವೀಕರಣ, (3) ಬೊಂಬಾಯಿಯ ಚೆಂಬೂರ್ ಬಡಾವಣೆಯಲ್ಲಿ ಲಕ್ಷ್ಮೀನೃಸಿಂಹ, ನಾರಾಯಣ ಮತ್ತು ಹಯಗ್ರೀವ ಸನ್ನಿಧಿ ನಿರ್ಮಾಣ, (4) ತಿರುವಳ್ಳೂರಿನಲ್ಲಿ ಯಾವ ಕಾಲದಲ್ಲಿಯೂ ಬತ್ತಿ ಹೋಗದಂತೆ ಇರುವ 'ಹೃತ್ತಾಪನಾಶಿನಿ' ಪುಷ್ಕರಿಣಿ ನಿರ್ಮಾಣ (5) ಪುಳ್ಳಬೂದಂಗುಡಿ, ವಾನಮಾಮಲೈ ಮತ್ತು ಬೆಂಗಳೂರಿನಲ್ಲಿ ಮಠಸ್ಥಾಪನೆ, (6) ಆದನೂರಿನ 'ಆಂಡಾಳ್‌ಕ್ಕುಮೈಯನ್' ಮೂಲ ಮೂರ್ತಿಯ ದುರಸ್ತಿ ಕಾರ್ಯ, (7) ಪ್ರಥಮ ಬಾರಿಗೆ ತೆಲುಗಿನಲ್ಲಿ 'ನೃಸಿಂಹಪ್ರಿಯ' ಪತ್ರಿಕೆ ಹೊರಡಿಸಿದ್ದು, (8) ಅರುಳ್‌ಮೊಳಿ–ಕಠಿಣಪದಗಳ ಅರ್ಥತಾತ್ಪರ್ಯ ಪ್ರಕಟಣೆ, (9) ಗ್ರಂಥಬಾಹುಳ್ಯ – ಶಾರೀರಕಾಧಿಕರಣ ಕ್ರಮಬೋಧಿನಿ,

(27 ನೇ ಪುಟ ನೋಡಿ)

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4-50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12-50

ಪುರಂದರೋಪನಿಷತ್ (ಪುರಂದರದಾಸರ ಏಳುಕ್ತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7-00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3-75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2-25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4-00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3-00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10-00

ಆಚಾರಗಳು ಆಡಂಬರಗಳು —ಕೆ. ಚಂದ್ರಮೌಳಿ 0-40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0-50

" " (ಕನ್ನಡ ಲಿಪಿಯಲ್ಲಿ) 0-12

ಮಕ್ಕಳಿಗಾಗಿ :

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0-75

ಮಹಿಪತಿದಾಸರು –ಶಾನಭಾಗ 0-85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0-80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0-75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0-20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11-00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1-50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0-12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0-62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15-00

ಮಾರ್ಕಂಡೇಯ ಸಂಹಿತಾ 18-00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2-00

ಬ್ರಹ್ಮಸೂತ್ರ ಭಾಷ್ಯ (ಭಾಗ-1) –ಆರ್. ರಾಮಮೂರ್ತಿ ಶರ್ಮಾ 30-00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16-00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50-00

ಪ್ರಶ್ನೋಪನಿಷತ್ 11-00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ –ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25-00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

# ಶ್ರೀ ಕರಿಗಿರಿ ಲಕ್ಷ್ಮೀನೃಸಿಂಹ ಸುಪ್ರಭಾತ

ಲಕ್ಷ್ಮೀಸ್ತನ ಕಸ್ತೂರೀಲಾಂಛನಾಯುತವಕ್ಷಸೇ
ಶ್ರೀಮತ್ಕರಿಗಿರೀಶಾಯ ನಾರಸಿಂಹಾಯ ಮಂಗಳಂ

ಸುಪ್ರಭಾತವು ದೇವ ಕುಸುಮಾದ್ರಿವಾಸ ಶ್ರೀರಂಗ
ಶ್ರೀಲಕ್ಷ್ಮೀನರಸಿಂಹ ಕ್ಷೀರಾಬ್ಧಿನಿಲಯ ಶ್ರೀಕಾಂತ
ಏಳಯ್ಯ ಪ್ರಹ್ಲಾದವರದನೇ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀ ಲಕ್ಷ್ಮೀನರಸಿಂಹ ೧

ಬ್ರಹ್ಮಾಂಡವೆಲ್ಲವ ನಡುಗಿಸುತ ನರಸಿಂಹ ನೀನಾದೆ
ಕಂಬದಲಿ ಬಿಂಬಿಸಿದೆ ಕಂದನೊಲವಿನ ಕರೆಗೆ ಓಗೊಟ್ಟು
ಪರಮ ಕರುಣಾಸಿಂಧು ನಳಿನನಾಭನೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀ ಲಕ್ಷ್ಮೀನರಸಿಂಹ ೨

ದೈತ್ಯನನು ಸಂಹರಿಸಿ ಕರುಳ ಮಾಲೆಯ ಧರಿಸಿ
ಕಂದನನು ನೀಕಾಯ್ದೆ ಪರಮ ಕರಣಾಸಿಂಧು
ಕಮಲಾಕ್ಷ ಕಂದರ್ಪಪಿತ ಖಗವಾಹನನೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೩

ವಕ್ಷಸ್ಥಲದಿ ಶ್ರೀರಮಣಿಗೆಡೆಯಿತ್ತ ಪರಮವೈಷ್ಣವ ನೀನು
ವಾತ್ಸಲ್ಯವಾರಿಧಿಯೆ, ಪ್ರಹ್ಲಾದವರದ ಶ್ರೀರಂಗರಂಗ
ನಿನ್ನ ನುತಿಪರ ಸಲಹೆ ಬೇಗೆದ್ದು ಬಾತಂದೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೪

ಗಂಧರ್ವಗಾಯಕರು ಶಾಪದಿಂ ಕರಿಗಿರಿಯಾಗಿ
ತಪವ ಗೈಯಲು ಮೆಚ್ಚಿ ಪೊರೆದವನೆ
ಭಕ್ತಬಾಂಧವನೆ ಶರಣಾಗತವತ್ಸಲನೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೫

ಹತ್ತುಸಾವಿರ ವರ್ಷ ತಪದಿ ಮೆಚ್ಚಿಸೆ ನಿನ್ನ
ಅಜಗೊಲಿದು ಕುಂಭಿಯಲಿ ನಿಂತವನೇ ಗೋವಿಂದ
ನಾರಾಯಣನೆ ಪಾಲ್ಗಡಲ ಶಯನನೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಯೋಗನರಸಿಂಹ ೬

ಮುಂದೆ ದೂರ್ವಾಸರಿಗೊಲಿದ ಗೋವಿಂದ
ಕಲ್ಯಾಣಗುಣಧಾಮ, ಕಾಜಾಣ ಕೋಗಿಲೆಯು
ಕರೆದಿಹವು ಬೇಗೆದ್ದು ಬಾರಯ್ಯ ಶ್ರೀರಮಣ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಭೋಗನರಸಿಂಹ ೭

ಕಲಿಯುಗದಿ ಕರಿಗಿರಿಯ ಶಿಖರದಲಿ ನೀ ನಿಂತೆ
ಭುವಿಯ ದುರಿತವ ತೊಳೆವ ಪರಮಕರುಣಾಜಲಧೆ
ಬೇಡಿಬೇಡಿದ ವರಗಳನೀವ ಕಾಮಧೇನುವು ನೀನು ಕರಿಗೀರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೮

ವಾಸುಕಿಯು ಗರುಡ ಗಂಧರ್ವಾದಿಗಳು ಸತತ
ನುತಿಸುತ್ತಿಹರು ನಿನ್ನ ಲೋಕೈಕನಾಥ ಶ್ರೀಕಾಂತ
ಏಳಯ್ಯ ಪ್ರಸನ್ನ ಮುಖಭಾಸ್ಕರನೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೯

ಗಜರಾಜ ನಾಗಾಧಿರಾಜ ಹಯಾಧಿರಾಜರೆಲ್ಲರ
ಸುಘೋಷವನು ಆಲಿಸೇಳಯ್ಯ ಶ್ರೀವತ್ಸಚಿಹ್ನ
ಪಕ್ಷಿಸಂಪದ ಗಾನಾಮೃತವ ಕೇಳಯ್ಯ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೦

ಯತಿರಾಜ ಕುಲಶೇಖರರು ಬೋಧಾಯನರಾದಿ
ಭಕ್ತಿಯಲಿ ನಿನ್ನನನವರತ ಸೇವಿಪರು ಶ್ರೀರಂಗರಂಗ
ಕರಿಗಿರೀಶನೆ ಶ್ರೀವೈಷ್ಣವಸತತಮರ್ಚಿತ ಮಂಗಳಾಂಗ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೧

ಪಾದತೀರ್ಥದಿ ಮಿಂದು ಭಕ್ತಜನಸಾಗರವು
ಆರತಿಯ ಬೆಳಗೆ ಸಿರಿಮೊಗದಿ ನಿಂತಿಹುದು ಕರಿಗಿರೀಶ
ಯೋಗನಿದ್ರೆಯು ಸಾಕು ಸ್ವೀಕರಿಸು ಬಾತಂದೆ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೨

ಮಲ್ಲಿಜಾಜಿಯ ಮಾಲೆ ಸುಗಂಧಶ್ರೀರಾಜ
ಶ್ರೀತುಳಸಿ ಚಂದನದಿ ಸುರರು ಕಾದಿಹರಯ್ಯ
ಕರಿಗಿರೀಶ ನಿನ್ನ ಸೇವೆಗೆ, ಸ್ವೀಕರಿಸು ಬಾತಂದೆ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೩

ಚಂದನದ ಗಿರಿನಿಲಯ ಚೆಲುವ ಚೆನ್ನಿಗನೆ
ಚೆಂಚುಲಕ್ಷ್ಮೀರಮಣ ಪ್ರಹ್ಲಾದ ನಾರದಾದಿಗಳು
ಚೆಂದದಾರುತಿ ತಂದು ಹಾಡಿಹರು ಕರಿಗಿರೀಶನೆ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೪

---

**ಶ್ರೀ ಬಿ. ಎಸ್. ವೇಣುಗೋಪಾಲನ್**

---

# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | ಪರಿಷ್ಕೃತ ಬಾಡಿಗೆ/ದಿನಕ್ಕೆ | |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100–00 |
| ಟಿ. ಬಿ. ಒಳಗಿನ ಕಾಟೇಜುಗಳು | ರೂ | 70–00 |
| ಟಿ. ಬಿ. ಹೊರಗಿನ ಕಾಟೇಜುಗಳು | | |
| ಮೂರನೆಯ ಸಾಲೂ ಸೇರಿದಂತೆ: | | |
| ಎ ವಿಭಾಗ– ಗೈಸರ್‌ನೊಂದಿಗೆ | ರೂ | 20–00 |
| ಬಿ ವಿಭಾಗ– ಗೈಸರ್ ರಹಿತ | ರೂ | 12–00 |
| ವಿ.ವಿ.ಸಿ. ಹಾಗೂ ಎಂ.ಬಿ.ಸಿ 31 ಹಾಗೂ 26 | ರೂ | 70–00 |
| ಎಂ.ಬಿ ಸಿ. ಎ–ಭಾಗ ಗೈಸರ್‌ನೊಂದಿಗೆ | ರೂ | 20–00 |
| ಎಂ.ಬಿ.ಸಿ. ಬಿ–ಭಾಗ ಗೈಸರ್ ರಹಿತ | ರೂ | 12–00 |
| ಟಿ.ಬಿ. ಸೂಟ್‌ಗಳು ಗೈಸರ್‌ನೊಂದಿಗೆ | ರೂ | 15–00 |
| ಎ ಟಿ.ಸಿ. ಸೂಟ್‌ಗಳು ಗೈಸರ್ ರಹಿತ | ರೂ | 10–00 |
| ಎ.ಟಿ.ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30–00 |
| ಬಿ–ಭಾಗ | ರೂ | 30–00 |
| ಎಸ್.ಎಂ.ಸಿ., ಎಸ್.ಎನ್.ಸಿ., ಎ.ಎನ್.ಸಿ, | | |
| ಜಿ.ಎನ್.ಸಿ, ಎಚ್.ವಿ.ಸಿ.: | | |
| ಎ–ಭಾಗ ಗೈಸರ್ ರಹಿತ | ರೂ | 12–00 |
| ಬಿ–ಭಾಗ ” | ರೂ | 12–00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) ಗೈಸರ್ ನೊಡನೆ | ರೂ | 25–00 |
| ಎಚ್.ವಿ.ಸಿ. ಸೂಟ್ಸ್ (ಪ್ರತಿಯೊಂದು) ಗೈಸರ್‌ರಹಿತ | ರೂ | 12–00 |
| ಎಚ್.ವಿ.ಪಿ. ಅತಿಥಿಗೃಹ ದೊಡ್ಡ ಸೂಟ್ (ಗೈಸರ್‌ನೊಡನೆ) | ರೂ | 50–00 |
| ” ” ಸಣ್ಣ ಸೂಟ್ (ಗೈಸರ್ ರಹಿತ) | ರೂ | 25–00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70–00 |
| ” ” ಮೂಲೆ ಸೂಟ್ | ರೂ | 60–00 |
| ” ” ಇತರೆ | ರೂ | 50–00 |
| ಎನ್.ಜಿ. ಅತಿಥಿಗೃಹ I ಹಾಗೂ II | | |
| ಮೂಲೆ ಸೂಟ್ | ರೂ | 60–00 |

| | | |
|---|---|---|
| ಇತರೆ | ರೂ | 50–00 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250–00 |
| ಎಸ್. ಪಿ. ಅತಿಥಿಗೃಹ: | | |
| ಮಾಸ್ಟರ್ ಸೂಟ್ ಸಂ. 9 ಹಾಗೂ | | |
| ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750–00 |
| ಮಾಸ್ಟರ್ ಸೂಟ್ ಸಂ. 1 | | |
| ಕಿರಿಯ ಸೂಟ್ ಸಂ. 6 | | |
| ಕಿರಿಯ ಸೂಟ್‌ಗಳು ಸಂ–2, 3, 4, 5, | ರೂ | 750–00 |
| ಶ್ರೀನಿಕೇತನ (ಪ್ರತಿ ಸೂಟ್), | | |
| ಎಸ್.ಪಿ. ನಗರ್ ಅತಿಥಿಗೃಹ ನಂ.-IV | ರೂ | 250–00 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250–00 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250–00 |
| ಗೋಕುಲಂ (ಎ. ಸಿ.) | ರೂ | 500–00 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು): | | |
| ಎಸ್.ಎಂ.ಸಿ. 272, 260, 266, 267 | ರೂ | 75–00 |
| ರೂಯಾ 248 | ರೂ | 100–00 |
| ಗೋಗಿನೇನಿ 226 | ರೂ | 100–00 |
| ಚಿದಂಬರಂ ಚೆಟ್ಟಿಯಾರ್ ಕಾಟೇಜ್ | ರೂ | 125–00 |
| ಎ. ಟಿ. ಸಿ.– 99 | ರೂ | 100–00 |
| ಟಿ. ಬಿ. ಸಿ. 136, 152, 71 | ರೂ | 75–00 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500–00 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000–00 |
| ಹೊಸದಾಗಿ ನಿರ್ಮಿತವಾದುವು: | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60–00 |
| ಮೊದಲ ಅಂತಸ್ತಿನ ಕಾಟೇಜುಗಳು ಅರ್ಧ ಕಾಟೇಜು | ರೂ | 30–00 |
| ಎಸ್. ಎನ್. ಅತಿಥಿಗೃಹ ಪ್ರತಿ ಸೂಟ್ | ರೂ | 50–00 |
| ರಾಮಬಗೀಚಾ ಅತಿಥಿಗೃಹ ” | ರೂ | 50–00 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯ್ದಿರಿಸುವಿಕೆಗಾಗಿ ಬರೆಯಿರಿ.

**ಉಪ ಕಾರ್ಯನಿರ್ವಹಣಾಧಿಕಾರಿ** (ಸ್ವಾಗತ-II)
ತಿ. ತಿ. ದೇವಸ್ಥಾನಗಳು, ತಿರುಮಲೆ.

ಕಾನನದಿ ತರುರಾಜಿ ಸಿರಿಸೊಗದಿ ನಿಂದಿಹುದು
ಕಾದಿಹುದು ಹೊನ್ನಮಣಿಮಾಲೆ ಸಿಂಗರಿಸಿ
ಶ್ರೀಮುಖದ ದರ್ಶನವ ನೀಡೆಮಗೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೫

ನಿನ್ನ ಶ್ರೀಚರಣಕೆ ನಮಿಸಿ ನಿನ್ನಸೇರಲು ಬಯಸಿ
ತವಕದಲಿ ಹಾಡಿದರು ಶಿಂಷೆ ಜಯಮಂಗಳೆಯರು
ಮಂಗಳಾಂಗನೆ ಏಳು ಶ್ರೀರಂಗರಂಗ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೬

ಪರಿಪರಿಯ ಪುಷ್ಪಗಳ ಮುಡಿತುಂಬ ತುಂಬಿಹಳು
ಮಿಂದುನಿಂದಿಹಳು ಪರಿಮಳದಿ ವನಸಿರಿಯು
ನಿಂದಿಹಳು ಪುಳಕಾಂಕಿತಳಾಗಿ ಏಳಯ್ಯ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೭

ವಿಧವಿಧದ ಫಲಭರಿತ ವೃಕ್ಷಸಂಪದವೆಲ್ಲ ಸಂತಸದಿ
ಸಿಹಿಯೆಲ್ಲ ನಿನಗೆ ಮೀಸಲು ಎಂದು ಸಾನುರಾಗದಿ
ಬಾಗಿ ಕರೆದಿಹುವು ಸ್ವೀಕರಿಸು ಬಾ ತಂದೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೮

ಸುತ್ತೆಲ್ಲ ದಿಕ್ಕಿನಲಿ ನಮಿಸಿ ನಿಂದಿಹುವು
ಗಿರಿವೃಂದ ಸೊಗದಿ ಸೊಬಗಿನಲಿ ಸಾಲುಸಾಲಾಗಿ
ಲೋಕವೆಲ್ಲಕು ಬಂಧು ನೀನೇ ಎಂದು ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೧೯

ಮೂಡಲಲಿ ಗರುಡಾದ್ರಿ ಪಡುವಲಗೆ ಭೀಮಗಿರಿ
ಉತ್ತರಕೆ ನಾರಾಯಣಾಚಲವು, ಶ್ರೀನಿವಾಸನೆ
ಶಿವಗಂಗೆ ದಕ್ಷಿಣಕೆ ಬೆಳಗಿಹವು ಅಂದದಲಿ ಕರಿಗಿರೀಶನೆ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೦

ವೃಷಭಗಿರಿ ಈಶಾನ್ಯದಲಿ ವಾಯುವ್ಯದಲಿ
ಹೇಮಾಚಲವು, ಕೂರ್ಮಾಚಲವಾಗ್ನೇಯದಲಿ
ನೈರುತ್ಯದಲಿ ರಾಮಾಚಲವು ಹಾಡಿಹವು ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೧

ಎಂಟುದಿಕ್ಕುಗಳಲ್ಲೆಂಟು ಕ್ಷೇತ್ರಗಳೆಂಟೆಂಟು
ದಿವ್ಯಧಾಮಗಳೆಂದೊಡಗೂಡಿ ಸ್ತುತಿಸಿಹುವು
ಹಾಡಿಹವು ನಿನಗೆ ಶುಭೋದಯವ ಕರಿಗಿರೀಶನೆ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೨

ಪಾಹಿನರಸಿಂಹ ಪಾಹಿ ನರಸಿಂಹ ಪಾಹಿ ಸಿರಿರಮಣ
ಎಂದಾಡಿ ಆರತಿಯ ಬೆಳಗಿಹರು ಭಕ್ತಜನ
ಆರತೀಬಂಡೆಯಲಿ ಸಡಗರದಿ, ನೋಡು ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೩

ಮತ್ಸ್ಯಕೂರ್ಮನು ನೀನೆ, ಶ್ರೀಲಕ್ಷ್ಮೀನರಸಿಂಹ
ವರಾಹವಾಮನನು ನೀನೇ ಪರಶುಧರರಾಮ
ಗೋಪೀನಾಥ ಬುದ್ಧಕಲ್ಕಿಯು ನೀನೆ ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೪

ಅಮಿತಜನ ರಾಮಸೀತೆಯರೊಡನೆ ಲಕ್ಷ್ಮಣರಾದಿ
ಧರಿಸಿ ತಿಲಕವ ಮುದದಿ ನಾಮಚಲುಮೆಯಲಿ
ನಡೆದು ನೆರೆದಿಹುದು ನಿನ್ನ ದರುಷನಕೆ ಕರಿಗಿರೀಶನೆ
ಸುಪ್ರಭಾತ ನಿನಗೆ ಶ್ರೀಲಕ್ಷ್ಮೀನರಸಿಂಹ ೨೫

ಬ್ರಹ್ಮಾದಿ ದೇವಗಣ ನೆರೆದಿಹುದು ಫಾಲ್ಗುಣವೆಂದು
ಬಹುಳಪೌರ್ಣಮಿಯೆಂದು ದೇವ ಪುಷ್ಪೆಯಲಿ
ನಿನಗೆ ರಥೋತ್ಸವದ ಸೇವೆ ಎಂದೆನುತ ಕರಿಗಿರೀಶನೆ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೬

ಸಾವಿರದ ಸಂಖ್ಯೆಯಲಿ ಕಂದಮ್ಮಗಳೊಡನಾಡಿ
ಮಡಿಯುಟ್ಟು ನಿಂತಿಹೆವು ನಿನ್ನ ದರುಶನಕೆಂದು
ಮಂಟಪಪಡಿ ಸೇವೆಯಾ ವೇಳೆಯಾಯ್ತು ಕರಿಗಿರೀಶ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೭

ವಿಧವಿಧದ ಭಕ್ಷ್ಯಭೋಜ್ಯಗಳ ತಂದಿಹರು ಭಕ್ತಜನ
ಈರೇಳು ಲೋಕವಂ ತುಂಬಿಹುದು ಸುಮಧುರ ಸೌಗಂಧ
ಬೇಗೆದ್ದು ಬಾರಯ್ಯ ಸ್ವೀಕರಿಸಿ ಸಲಹೆಮ್ಮ 'ಕರಿಗಿರೀಶ'
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೮

ಗಗನದಲಿ ಸಂಚರಿಸಿ ಗರುಡದೇವನುಬಂದ ತವಕದಲಿ
ಬ್ರಹ್ಮರಥೋತ್ಸವದ ಸೇವೆ ನಿನಗೆಂದು ಕರಿಗಿರೀಶನೆ
ಕಾದಿಹರು ಕಾತುರದಿ ಭಕ್ತಜನ ತೇರನೆಳೆಯಲು ಬಯಸಿ
ಸುಪ್ರಭಾತವು ನಿನಗೆ ಶ್ರೀಲಕ್ಷ್ಮೀನರಸಿಂಹ ೨೯

ತೇರನೇರುತ ಮುದದಿ ಮಂಗಳಾಂಗನೆ ಶ್ರೀರಂಗರಂಗ
ತೇರನೆಳೆದಿಹ ಭಕ್ತರಾ ಬಾಳರಥವನು ನಡೆಸು ಬಾತಂದೆ
ಕೇಳು ಜಯಘೋಷ ಮುಗಿಲ ಮುಟ್ಟಿಹುದು
ಜಯತುಜಯ ಕರಿಗಿರೀಶ ಜಯತುಜಯ ಕರಿಗಿರೀಶ ೩೦

ಜಯತು ಜಯ ಶ್ರೀಯೋಗನರಸಿಂಹ,
ಜಯತು ಜಯ ಶ್ರೀಭೋಗನರಸಿಂಹ,
ಜಯತು ಜಯ ಪ್ರಹ್ಲಾದವರದ ಜಯತುಜಯ
ಭಕ್ತವತ್ಸಲನೇ ದೇವ ಜಯತುಜಯ ನರಸಿಂಹ ೩೧

ಮಂಗಳವು ಶ್ರೀಲಕ್ಷ್ಮೀನರಸಿಂಹ ಮಂಗಳವು ಪ್ರಹ್ಲಾದವರದ
ಮಂಗಳವು ದಾಸಗೋಪಾಲಗೆ ಈಶ ಕರಿಗಿರೀಶ
ಮಂಗಳವು ದೇವರಾಯನದುರ್ಗದಧಿಪತಿಯೆ
ನಿತ್ಯ ಶುಭಮಂಗಳವು ನಿತ್ಯ ಜಯಮಂಗಳಂ ೩೨

ಸುಪ್ರಭಾತವಿದ ರಚಿಸಿದನು ಪ್ರೇಮದಲಿ ಪ್ರಭವ ಮಾಘದಲಿ ದಾಸಗೋಪಾಲ, ಇದನೋದಿಕೇಳ್ವ ಸಕಲರಿಗೆ ಕರುಣಿಸನು ಸಕಲಸನ್ಮಂಗಳವ ಒಲಿದುಪೊರೆವನು ನಮ್ಮ ಕರಿಗಿರೀಶ ಪ್ರಹ್ಲಾದವರದಾಂಕಿತ ಶ್ರೀಲಕ್ಷ್ಮೀನರಸಿಂಹ. ★

ಆಲಿಸಿ ಕೊಳ್ಳಿರಿ

ಆನಂದಿಸಿ ಕೊಳ್ಳಿರಿ

ತಿರುಮಲೆ ತಿರುಪತಿ ದೇವಸ್ಥಾನಗಳು

# ಹರಿದಾಸ ಪದ ತರಂಗಿಣಿ

## ದಾಸಸಾಹಿತ್ಯದ ಧ್ವನಿ ಸುರುಳಿಗಳು

**(ಪ್ರತಿಯೊಂದೂ 60 ನಿಮಿಷ)**

1. ಶ್ರೀನಿವಾಸ ಸಂಸ್ತುತಿ

ನಂ. 10001 – ಪುರಂದರದಾಸರ ಹನ್ನೆರಡು ಕೃತಿಗಳು, ಸಂಗೀತ ನೀಡಿ ಹಾಡಿದವರು–ಲಲಿತ ಹಾಗೂ ಸರೋಜ. (ಬೊಂಬಾಯಿ ಸೋದರಿಯರು)

ಬೆಲೆ ರೂ 25–00

2. ಶ್ರೀನಿವಾಸ ವೈಭವ

ನಂ. 10002 – ಪುರಂದರದಾಸರ ಹದಿನೈದು ಕೃತಿಗಳು, ಸಂಗೀತ ನೀಡಿ ಹಾಡಿದವರು – ಡಾ॥ ಎಂ.ಎಲ್. ವಸಂತಕುಮಾರಿ

ಬೆಲೆ: ರೂ 25–00

3. ಹರಿದಾಸರು ಕಂಡ ಶ್ರೀನಿವಾಸ

ನಂ. 10003 – ಶ್ರೀಪಾದರಾಜರು, ವಾದಿರಾಜರು, ಕನಕದಾಸರು, ಪುರಂದರದಾಸರು, ವಿಜಯದಾಸರು, ಗುರುಜಗನ್ನಾಥದಾಸರುಗಳ ಹದಿನಾಲ್ಕು ಕೃತಿಗಳು. ಸಂಗೀತ. ಟಿ.ವಿ. ಗೋಪಾಲಕೃಷ್ಣನ್, ಹಾಡಿದವರು ಶ್ರೀ ಶ್ರೀ ವಿದ್ಯಾಭೂಷಣ ತೀರ್ಥಸ್ವಾಮಿಜಿ.

ಬೆಲೆ ರೂ 25–00

4. ತಿರುಮಲೆಯ ಚೆಲುವ

ನಂ. 10004 – ಪ್ರಸನ್ನ ವೆಂಕಟದಾಸರ ಹದಿನಾರು ಕೃತಿಗಳು ಸಂಗೀತ ನೀಡಿ ಹಾಡಿದವರು – ವಾಣಿಜಯರಾಂ.

ಬೆಲೆ: ರೂ 25–00

5. ಮೂರುನಾಮಗಳ ಮೂರುತಿ

ನಂ. 10005 – ಜಗನ್ನಾಥದಾಸ ಹಾಗೂ ಗೋಪಾಲದಾಸರ 17ಕೃತಿಗಳು ಸಂಗೀತ ನೀಡಿ ಹಾಡಿದವರು – ಲಲಿತ ಹಾಗೂ ಸರೋಜ (ಬೊಂಬಾಯಿ ಸೋದರಿಯರು)

ಬೆಲೆ: ರೂ 25·00

6. ಶ್ರೀನಿವಾಸ ತತ್ತ್ವ

ನಂ. 10006 – ಪುರಂದರದಾಸರ 16 ಕೃತಿಗಳು. ಸಂಗೀತ–ರಾಧಾಕಾಂಡ ವೇಶ್ವರ್, ಹಾಡಿದವರು - ಬೆಳ್ಳೂರು ಸೋದರಿಯರು.

ಬೆಲೆ: ರೂ 25–00

7. ಭಳಿರೆ ತಿರುವೆಂಗಳರಾಯ

ನಂ. 10007 – ವಿಜಯದಾಸರ 17 ಕೃತಿಗಳು. ಸಂಗೀತ ನೀಡಿ ಹಾಡಿದವರು – ಆರ್.ಕೆ. ಶ್ರೀಕಂಠನ್.

ಬೆಲೆ. ರೂ 25–00

8. ಗೋವಿಂದ ಮಿತ್ರಾಯ

ನಂ. 10008 – ಪುರಂದರದಾಸರ 17 ಕೃತಿಗಳು. ಸಂಗೀತ ಆರ್ ಕೆ. ಶ್ರೀಕಂಠನ್. ಹಾಡಿದವರು – ರತ್ನಮಾಲಾ ಪ್ರಕಾಶ್

ಬೆಲೆ: ರೂ 25–00

9. ಗೋವಿಂದ ನಾಮಾಮೃತ

ನಂ. 10009 – ಪುರಂದರದಾಸರ 17 ಕೃತಿಗಳು, ಸಂಗೀತ ನೀಡಿ ಹಾಡಿದವರು – ಸಂತ ಭದ್ರಗಿರಿ ಅಚ್ಯುತದಾಸರು.

ಬೆಲೆ· ರೂ 25–00

## ಸಂಗೀತಾದವರಲ್ಲಿ ಮಾತ್ರವೇ ದೊರೆಯುವ ಕ್ಯಾಸೆಟ್‌ಗಳು

10. ಶ್ರೀನಿವಾಸನದರ್ಶನ

ನಂ. 10050 – ಗುರುಜಗನ್ನಾಥದಾಸರ 18 ಕೃತಿಗಳು, ಸಂಗೀತ ಟಿ.ಕೆ. ಗೋವಿಂದರಾವ್, ಹಾಡಿದವರು – ಲಲಿತ ಹಾಗೂ ಸರೋಜ (ಬೊಂಬಾಯಿ ಸೋದರಿಯರು.

ಬೆಲೆ: ರೂ 28–00

11. ಹರಿದಾಸ ಗಾನಸುಧ

ನಂ. 10051 – ಶ್ರೀಪಾದರಾಜ, ಪುರಂದರದಾಸ, ಕನಕದಾಸ, ವಿಜಯ ದಾಸ, ವೇಣುಗೋಪಾಲದಾಸ, ವ್ಯಾಸವಿಠಲದಾಸರ ಹನ್ನೆರಡು ಕೃತಿಗಳು, ಸಂಗೀತ· ಜಿ. ಬಾಲಕೃಷ್ಣಪ್ರಸಾದ್, ಹಾಡಿದವರು – ಜಿ ಬಾಲಕೃಷ್ಣಪ್ರಸಾದ್ ಮತ್ತು ಜಿ ವಿಜಯಬಾಲ.

ಬೆಲೆ: ರೂ 28–00

12. ವೆಂಕಟನ ವೈಭವ

ನಂ. 10052 – ವ್ಯಾಸರಾಜ, ವಾದಿರಾಜ, ಪುರಂದರದಾಸ, ಕನಕದಾಸ, ಜಗನ್ನಾಥದಾಸರ 13 ಕೃತಿಗಳು, ರಾಗಸಂಯೋಜನೆ: ಪಿ ರಾಮನಾಥನ್, ಹಾಡಿದವರು – ಚಾರುಮತಿ ರಾಮಚಂದ್ರನ್.

ಬೆಲೆ: ರೂ 28–00

13. ಶ್ರೀನಿವಾಸ ಸ್ತುತಿ ಸೌರಭ ( 45 ನಿಮಿಷ)

ನಂ. 10053 – ಪುರಂದರದಾಸ, ಕನಕದಾಸ, ವಿಜಯದಾಸ, ಪ್ರಸನ್ನ ವೆಂಕಟದಾಸರುಗಳ 12 ಕೃತಿಗಳು, ಹಾಡಿದವರು ಶ್ರೀ ಶ್ರೀ ವಿದ್ಯಾಭೂಷಣ ತೀರ್ಥ ಸ್ವಾಮಿಜಿ, ಡಾ॥ ಎಂ. ಎಲ್. ವಸಂತಕುಮಾರಿ, ಜಿ. ಬಾಲಕೃಷ್ಣ ಪ್ರಸಾದ್, ಬೊಂಬಾಯಿ ಸೋದರಿಯರು, ಸಂತ ಭದ್ರಗಿರಿ ಅಚ್ಯುತದಾಸರು, ಆರ್.ಕೆ. ಶ್ರೀ ಕಂಠನ್, ಬೆಳ್ಳೂರು ಸೋದರಿಯರು, ಚಾರುಮತಿ ರಾಮಚಂದ್ರನ್.

ಬೆಲೆ. ರೂ 25–00

1 ರಿಂದ 9ರ ವರೆಗಿನ ಕ್ಯಾಸೆಟ್‌ಗಳು ಸಂಗೀತಾದವರಲ್ಲೂ ದೊರೆಯುತ್ತವೆ ಬೆಲೆ ಪ್ರತಿಯೊಂದಕ್ಕೆ ರೂ 28–00

ಎಲ್ಲ ಕ್ಯಾಸೆಟ್‌ಗಳೂ ತಿರುಮಲೆ ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ಅವರ ತಯಾರಿಕೆಯಾಗಿದ್ದು, ಹರಿದಾಸರ ಕೃತಿಗಳಲ್ಲಿ ಶ್ರೇಷ್ಠತಮವಾದ ಕೀರ್ತನೆಗಳನ್ನು ಆಯ್ದುಕೊಂಡು ಪ್ರಸ್ತುತಪಡಿಸಲಾಗಿದೆ. ಕಲಿಯುಗ ಪ್ರತ್ಯಕ್ಷ ದೈವ ವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಕುರಿತು ಆಗಿರುವ ಹರಿದಾಸರ ಕೃತಿಗಳಿಗೆ ಪ್ರಾಧಾನ್ಯವನ್ನು ನೀಡಲಾಗಿದೆ

**ಕನ್ನಡ ಹರಿದಾಸರ ಅಪೂರ್ವ ಸಾಹಿತ್ಯ ಸೃಷ್ಟಿ**
**ಕಮನೀಯ ಗಾನಕಲಾಕೋವಿದರ ಸರಸಸಂಗೀತ ಸುಧಾವೃಷ್ಟಿ.**

**ನಿಮ್ಮ ಹತ್ತಿರದ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ**
**ಕೂಡಲೇ ವಿಚಾರಿಸಿ**




ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು-
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ಆಧ್ಯಾತ್ಮ ಶ್ರೀರಾಮಸ್ತೋತ್ರಂ

(ಹಿಂದಿನ ಸಂಚಿಕೆಯಿಂದ)

ನಿಜಾನಂದ ಮಹಾಘಾತಕಾರಿ ಷಡ್ವೈರಿನಾಶಕಃ ।
ಶ್ರೀರಾಮಃ ಸ್ಥಿರತಾಂ ಯಾತು ಶತ್ರುಘ್ನೇನ ಚಿರಂ ಮಯಿ ॥ ೩೮ ॥

ನಿಜವಾದ ಆನಂದಘಾತಕವು ಆರರ
ವೈರಿವರ್ಗವು ಈತ ಅದರ ನಾಶಕನು ।
ಶ್ರೀರಾಮ ಶತ್ರುಘ್ನನಿವನು ನನ್ನಲ್ಲಿ
ಎಲ್ಲ ಕಾಲಗಳಲ್ಲಿ ಸ್ಥಿರದಿ ನಿಂತಿರಲಿ ॥

ಸದೇಹೋಂಕಾರತತ್ತ್ವೋಽಸೌ ಮಾರುತಿಸ್ಸು ಮಹಾಧ್ವನಿಃ ।
ದಿವ್ಯತೇಧ್ವನ್ಯನೇನೈವ ದರ್ಶನಂ ತೇ ಪರಾತ್ಪರ ॥ ೩೯ ॥

ದೇಹವನು ಧರಿಸಿರುವ ಓಂಕಾರ ಮಾರುತಿಯು
ಅತಿಮಹತ್ತರವಾದ ಧ್ವನಿಯು ಈತನದು ।
ದಿವ್ಯತೆಯನೂ ಮೀರಿ ನಿಂತ ದೇವನೆ ನಿನ್ನ
ದರುಶನವು ನನಗೀವ ತೆರೆದ ಮಾರ್ಗದಲಿ ॥

ಪ್ರಾಣಾಯಾಮಸ್ವರೂಪೋಽಸೌ ನಿಜಶಕ್ತ್ಯವಬೋಧಕಃ ।
ಹನೂಮಾನ್ ಸ ತವಾಂಶೋ ಹಿ ಯತಸ್ತ್ವಂ ನನು ಮಾರುತಃ ॥ ೪೦ ॥

ಪ್ರಾಣಾಯಾಮವೇ ರೂಪ ಧರಿಸಿ ನಿಂತಿದೆ ಇವನ
ನಿಜಶಕ್ತಿಯನ್ನಿವನು ಎಚ್ಚರಿಸುವವನು ।
ವಾಯುವೂ ನೀನೆಂಬ ತತ್ತ್ವದಲಿ ರಾಮ
ಹನುಮಂತ ನಿನ್ನಂಶವೆನ್ನುವುದು ನಿಜವು ॥

ಓಂಕಾರೋ ಯೋಗಮಾರ್ಗಶ್ಚ ಜಾಗ್ರತಾಂ ಮಯಿ ನಿತ್ಯಶಃ ।
ಹನೂಮತ್ಕೃಪಯಾ ರಾಮ ತ್ವದಾದೇಶೇ ಸ ಮಾರುತಿಃ ॥ ೪೧ ॥

ನಿನ್ನಾದೇಶದಂತೆಯೇ ನಡೆವ ಹನುಮಂತ
ದೇವನ ಕೃಪೆಯಿಂದ ನನ್ನಲ್ಲಿ ನಿತ್ಯವೂ ।
ಓಂಕಾರ ಪ್ರಜ್ಞೆಯೂ ಯೋಗಮಾರ್ಗ ಗಮನವೂ
ಜಾಗರೂಕವಾಗಿರಲೆಂದು ಬೇಡುವೆನು ರಾಮ ॥

ಕೇಷು ದೇಶೇಷು ಧರ್ಮೇಷು ಜಾತಃ ಸ್ಯಾಂ ಜಗದಾದಿತಃ ।
ಯೋನಿಷ್ವಧ್ಯ ಚ ನಿರ್ಮೋಹಃ ಸಮಭಾವೇ ಭವಾಮ್ಯಹಮ್ ॥ ೪೨ ॥

ಜಗದಾದಿಯಿಂದಲೇ ಎಷ್ಟು ಯೋನಿಗಳಲ್ಲಿ
ಎಷ್ಟು ಧರ್ಮಗಳಲ್ಲಿ ದೇಶಗಳಲಿ ।
ನಾನು ಜನಿಸಿರಬಹುದು ಇಂದು ನಿರ್ಮೋಹನು
ಬದುಕುವೆನು ಸರ್ವಸಮಭಾವದಲ್ಲಿ ॥

ಕತಿ ಹಮ್ಯಾಣಿ ವಿದ್ಯಾಶ್ಚ ವಶೇ ಮೇ ಕತಿ ಜನ್ಮಸು ।
ಸಾಧಿಕಾರ-ಮಸೂನ್ಯದ್ಯ ನಿರ್ಲಿಪ್ತೋಽಹಂ ತತಃ ಪ್ರಭೋ ॥ ೪೩ ॥

ಎಷ್ಟು ಜನ್ಮಗಳಲ್ಲಿ ಎಷ್ಟು ಕಟ್ಟಡಗಳು
ಅಧಿಕಾರ ಸಹಿತವಾದೈಶ್ವರ್ಯವೆಷ್ಟೋ ।
ಎಷ್ಟು ವಿದ್ಯೆಗಳೆಲ್ಲ ನನ್ನ ವಶದಲಿ ಪ್ರಭುವೆ
ಇಂದು ನಾ ನಿರ್ಲಿಪ್ತನದರಿಂದಲೆ ॥

ಸ್ವಕರ್ತವ್ಯೇ ಮನೋಗ್ರಾಹಿಧರ್ಮೇ ಚೇತ್ಸಾರ್ಥಯೋರ್ದ್ವಯೋಃ ।
ಸ್ವಧರ್ಮಃ ಸಾರ್ಥಕೋ ದೇವ ಪದಪ್ರಾಪ್ತೌ ಹಿ ತೇ ಮಯಿ ॥ ೪೪ ॥

ನನಗಿರುವ ಕರ್ತವ್ಯ ನನ್ನ ಮನಸಿನ ಕಾರ್ಯ
ನಿಜದಿ ಸಾರ್ಥಕವೆನಗೆ ಈ ಎರಡರಲ್ಲಿ ।
ನನ್ನ ಧರ್ಮವು ಎಂಬ ಉಕ್ತಿಯದು ದೇವನೆ
ನಿನ್ನ ಪದವನು ಪಡೆವ ಆಸೆ ನನಗೆ ॥

ಓಂಕಾರಃ ಸ್ವಸ್ತಿಕ ಕ್ರೂಶಃ ಸನಕ್ಷತ್ರಂ ಚ ಚಂದ್ರಮಾಃ ।
ಇತ್ಯಾದಿ ಪ್ರತಿಮಾಃ ಸರ್ವಾಃ ಪ್ರಾಪ್ತುಂ ತ್ವತ್ಪದಮವ್ಯಯಂ ॥ ೪೫ ॥

ಅವ್ಯಯನೆ ಓಂಕಾರ-ಸ್ವಸ್ತಿಕ-ಕ್ರಾಸು
ನಕ್ಷತ್ರ ಸಹಿತನಾಗಿರುವ ಚಂದ್ರಮನು ।
ಮುಂತಾದ ಎಲ್ಲವೂ ನಿನ್ನ ಪದ ಪಡೆಯುವ
ಮಾರ್ಗದಲ್ಲಿಯ ವಿವಿಧ ಪ್ರತಿಮೆಗಳು ದೇವ ॥

ಪ್ರತಿಮಾಸ್ತೇ ಸಮಾಶ್ರಿತ್ಯ ನಿರಾಕಾರಸ್ಯ ಮಾದೃಶಾಃ ।
ನಾನಾಧರ್ಮೇಷು ರೂಪೇಷು ಭಜಂತೇ ತ್ವಾಂ ನರಾ ವಿಭೋ ॥ ೪೬ ॥

ನಿರಾಕಾರನು ನೀನು ಸರ್ವವ್ಯಾಪಕನೆ
ಬಹುಧರ್ಮ-ರೂಪಗಳು ದೇವನೆ ನಿನಗೆ ।
ನಿನ್ನ ಪ್ರತಿಮೆಗಳನ್ನು ಆಶ್ರಯಿಸಿಕೊಂಡು
ನನ್ನಂತ ಜನ ನಿನ್ನ ಭಜಿಸುತ್ತಲಿಹರು ॥

ಹೀನಬುದ್ಧಿ ಪರಂ ತ್ಯಕ್ತುಂ ಪ್ರತಿಮಾಂ ತೇಽಹಮಾಶ್ರಿತಃ ।
ಅಲ್ಪಬುದ್ಧೇರ್ಮಹಾಬುದ್ಧಿಂ ಗಂತುಂ ಸಾ ವಾಂಛಿತಾ ನನು ॥ ೪೭ ॥

ಹೀನಬುದ್ಧಿಯ ಮಾರ್ಗವನ್ನು ತ್ಯಜಿಸಲು ನಾನು
ಪ್ರತಿಮೆಯೊಂದನು ನಿನ್ನದಾಶ್ರಯಿಸಿದೆ ।
ಅಲ್ಪಬುದ್ಧಿಯ ಮೀರಿ ನಿಲ್ಲಲೆನಗಿದು ಬೇಕು
ಮಹಾಬುದ್ಧಿಯು ನನಗೆ ನಿಲುಕುವ ತನಕ ॥

ಮಮ ಬುದ್ಧಿಃ ಸ್ಥಿರಾ ಭೂಯಾತ್ ಲಿಂಗೇನ ತವಕೇನಚಿತ್
ನಿರ್ಗುಣೇ ತ್ವಯಿ ದೇವೇ ಚ ಸಾವ್ಯೇ ಸರ್ವಸಮಪ್ರಭೋ ॥ ೬೮ ॥

ಗುಣಾತೀತ ನಿನ್ನಲ್ಲಿ ಮತ್ತು ಸಮಭಾವದಲಿ
ನನ್ನ ಬುದ್ಧಿಯು ಈಗ ಸ್ಥಿರವಾಗಲಿ ।
ಯಾವುದಾದರೂ ನಿನ್ನ ಪ್ರತಿಮೆಮೂಲಕವಾಗಿ
ದೇವನೆ ಸರ್ವರಿಗೂ ಸಮನಾದ ಪ್ರಭುವೆ ॥

ವಿಭಿನ್ನಾನಿ ಚ ರತ್ನಾನಿ ಭೂತತತ್ತ್ವಸ್ಯೈವ ತತ್ತ್ವಶಃ ।
ಧರ್ಮಾಶ್ಚ ಜೀವಿನಃ ಸರ್ವೇ ದೇವ ತ್ವತ್ತತ್ತ್ವಸಂಶ್ರಿತಾಃ ॥ ೬೯ ॥

ಲೋಕದಲ್ಲಿಯ ಭಿನ್ನ ಭಿನ್ನ ರತ್ನಗಳೆಲ್ಲ
ಭೂತತತ್ತ್ವವೊಂದಕೇ ಸೇರಿಕೊಂಡಿಹವು ।
ದೇವ ಜೀವಿಗಳೆಲ್ಲ ಧರ್ಮಗಳು ಎಲ್ಲ
ನಿನ್ನ ತತ್ತ್ವಗಳನ್ನೆ ಅವಲಂಬಿಸಿಹವು ॥

ಜಲತ್ವಂ ಹಿ ವಿಭಿನ್ನೇಷು ವರ್ಣೇಷ್ವೇಕಂ ರಸೇಷು ಚ ।
ತಥಾ ಧರ್ಮೇಷು ಸರ್ವೇಷು ದೇವ ತ್ವಂ ಸರ್ವಜಂತುಷು ॥ ೭೦ ॥

ಭಿನ್ನ ಬಣ್ಣದಲಿರುವ ವಿವಿಧ ರಸಗಳಲಿ
ದೊರೆಯುವ ಜಲತತ್ತ್ವವೇಕ ಮಾತ್ರ ।
ಎಲ್ಲ ಧರ್ಮಗಳಲ್ಲಿ ಜೀವಿಗಳಲೆಲ್ಲ
ದೇವ ನೀನೊಬ್ಬನೇ ನಿತ್ಯ ನೆಲಸಿರುವೆ ॥

ಏಕಸ್ಯೈವ ಪ್ರದೀಪಸ್ಯ ಪ್ರಕಾಶೋ ಭಿನ್ನವರ್ಣಕಃ ।
ಭಿನ್ನವರ್ಣೇಷು ಕಾಚೇಷು ಧರ್ಮೇಷು ತ್ವಂ ತಥಾ ವಿಭೋ ॥ ೭೧ ॥

ಒಂದೇ ಮಹಾದೀಪದಿಂದ ಬಂದರೂ ಬೆಳಕು
ವಿಧವಿಧದ ಬಣ್ಣಗಳ ಕನ್ನಡಿಗಳಲ್ಲಿ
ವಿವಿಧಬಣ್ಣದಾಗಿ ಕಂಡುಬರುವುದು ವಿಭುವೆ
ಸರ್ವಧರ್ಮಗಳಲ್ಲಿ ನೀನು ಅದರಂತೆ ॥

ಅವಸ್ಥಾಸು ವಿಭಿನ್ನಾಸು ವಾಯುರೇಕೋಽಪಿ ಭಾವಿತಃ ।
ವಿಭಿನ್ನತ್ವೇನ ನಿತ್ಯಾತ್ಮನ್ ತಥಾ ತ್ವಂ ಸರ್ವಜಂತುಷು ॥ ೭೨ ॥

ವಾಯುವೊಬ್ಬನೆ ಒಬ್ಬ ಬಹುವಿಧಗಳಲ್ಲಿ
ಕಂಡು ಬರುವನು ಆತ ವಿವಿಧ ಸ್ಥಿತಿಗಳಲಿ ।
ಹಾಗೆಯೇ ನೀನಿರುವೆ ಎಲ್ಲ ಜೀವಿಗಳಲ್ಲಿ
ಭಿನ್ನ ಜೀವಾತ್ಮನೆಂದೆನಿಸಿ ಪರಮಾತ್ಮ ॥

ಏಕ ಏವ ಮಹಾಕಾಶೋ ವಿವಿಧೇಷು ಚ ವಸ್ತುಷು ।
ಜೀವಸ್ತ್ವತ್ರ ವಿಭಿನ್ನೇಷು ದೇವ ತ್ವಂ ಹಿ ತಥಾ ವಿಭುಃ ॥ ೭೩ ॥

ಒಂದೇ ಮಹಾಕಾಶವಿರುವುದೆಲ್ಲೆಡೆಗೆ
ವಿವಿಧ ವಸ್ತುಗಳಲ್ಲಿ ಜೀವಿಗಳಲಿ ।
ದೇವನೇ ನೀನಿರುವೆ ಸರ್ವವ್ಯಾಪಕನು
ಆ ತೆರದಿ ವ್ಯಾಪಿಸಿದ ಆಕಾಶದಂತೆ ॥

ಮನೋಽಹಂಕಾರಬುದ್ಧ್ಯಾದಿತತ್ತ್ವಾನಾಂ ಸೂಚ್ಯವಸ್ತುಷು ।
ತಥಾ ದೇವ ವಿಭೌ ಪೂರ್ಣೇ ವಿಲೀನೇಪ್ಸುರಹಂ ತ್ವಯಿ ॥ ೭೪ ॥

ಮನಸ್ಸಹಂಕಾರಬುದ್ಧಿ ಮುಂತಾದ
ತತ್ತ್ವಗಳ ಸೂಚಿಸುವ ವಸ್ತುಗಳಲೆಲ್ಲ ।
ಮತ್ತು ವಿಭುವಾಗಿರುವ ಪರಿಪೂರ್ಣ ನಿನ್ನಲ್ಲಿ
ಲೀನನಾಗಲು ನಾನು ಬಯಸಿರುವೆ ದೇವ ॥

ಪರಿಪೂರ್ಣೇ ಸದಾನಂದೇ ಚಾದ್ವಿತೀಯೇ ಪರಾತ್ಪರೇ ।
ಸ್ಥಿರಬುದ್ಧಿರಹಂ ಲೀನಃ ಪರಮಾತ್ಮನ್ ಸದಾತ್ವಯಿ ॥ ೭೫ ॥

ಸದಾನಂದನು ನೀನು ದೇವ ಪರಿಪೂರ್ಣ
ಪರಕ್ಕಿಂತಲೂ ಮಿಗಿಲಾದ ನೀನದ್ವಿತೀಯ ।
ಸ್ಥಿರಬುದ್ಧಿಯುವನಾದ ನಾನು ನಿನ್ನಲ್ಲಿ
ನಿಜವಾಗಿಯೂ ಲೀನ ಪರಮಾತ್ಮನೆ ॥

ಏವ ಮುಂಬಳೇಕೇಪ್ಪಸಂಜಾತೇನ ಕೃಷ್ಣಪ್ಪದಾಕ್ಷಾಯಣೀ ಸೂನುನಾ ಸಾಗರಸ್ಥೇನ ವೈಶ್ವಾಮಿತ್ರೇಣ "ಹೆಗಡೆ" ಇತ್ಯುಪಾಹ್ವೇನ ಗುರುಪಾದೇನ ವಿರಚಿತಂ ಆಧ್ಯಾತ್ಮ-ಶ್ರೀರಾಮಸ್ತೋತ್ರಂ ಸಂಪೂರ್ಣಮ್ ॥

---

**ವೃಕ್ಷೋ ರಕ್ಷತಿ ರಕ್ಷಿತಃ**

ಮರಗಳನ್ನು ಕಾಪಾಡಿರಿ; ಅವು ನಿಮ್ಮನ್ನು ಕಾಪಾಡುತ್ತವೆ

ಮರೆಯದಿರಿ;

ಮನುಷ್ಯ ಕರ್ತವ್ಯಗಳಲ್ಲಿ ತರುಗಿಡ ಸಂರಕ್ಷಣೆ,
ಪೋಷಣೆಗಳೂ ಉಂಟು.



ಯುವವಾಣಿ

# ಆರೋಗ್ಯಕ್ಕಾಗಿ ಯೋಗಾಸನಗಳು

ಯೋಗಾಸನವೆಂದ ಕೂಡಲೆ ಶ್ರೀ ಸಾಮಾನ್ಯನ ಮನದಲ್ಲಿ ಮೂಡುವ ಭಾವನೆಯೆಂದರೆ ಜಟಾಪಲ್ಕಲಧಾರಿಗಳಾಗಿ, ತಪೋವನಗಳಲ್ಲಿ ತಪಶ್ಚರ್ಯೆಯಲ್ಲಿರುವ ಋಷಿಮುನಿಗಳು ಅಥವಾ ಸಭೆ ಸಮಾರಂಭಗಳಲ್ಲಿ ತಮ್ಮ ಮೈಮೂಳೆಗಳನ್ನು ಬಗ್ಗಿಸಿ ಕೆಲ ನಿಮಿಷಕಾಲ ಸಾರ್ವಜನಿಕರಿಗೆ ವಿಸ್ಮಯ ಮನೋರಂಜನೆಯನ್ನು ಉಂಟುಮಾಡುವ ಯೋಗಾಸನ ಪ್ರದರ್ಶಕ. ಇವರ ಫಲಶ್ರುತಿಯೇನೆಂದರೆ ಅದು ತನಗೆ ಸಂಬಂಧಿಸಿದ್ದಲ್ಲವೆಂಬ ನಿರಾಸಕ್ತಿ ಅಥವಾ ತನಗದು ಅಸಾಧ್ಯವೆಂಬ ನಿರಾಶಾಭಾವನೆ.

ಅದರೆ ಇದು ಕೇವಲ ತಪ್ಪುಕಲ್ಪನೆಯೆನ್ನದೆ ವಿಧಿಯಿಲ್ಲ. ಯೋಗಾಸನಗಳು ನಮಗೆ ನೇರವಾಗಿ ಹಾಗೂ ನಿಕಟವಾಗಿ ಸಂಬಂಧಿಸಿದ್ದು, ಇದಕ್ಕೆ ಸ್ತ್ರೀ–ಪುರುಷ, ಬಾಲಕ–ವೃದ್ಧ, ರೋಗಿ–ನಿರೋಗಿ, ಬ್ರಹ್ಮಚಾರಿ–ಗೃಹಸ್ಥ, ಆಸ್ತಿಕ–ನಾಸ್ತಿಕ, ಬಡವ-ಬಲ್ಲಿದ ಎಂಬ ಯಾವ ಭೇದವೂ ಇಲ್ಲ. ಎಲ್ಲರಿಗೂ ಯೋಗಾಸನಗಳು ಅಪೇಕ್ಷಣೀಯ ಮಾತ್ರವಲ್ಲ; ಅತ್ಯಗತ್ಯ.

ನಾಣ್ಯಕ್ಕೆ ಎರಡು ಮುಖಗಳಿರುವಂತೆ ನಮ್ಮ ಬಾಳಿಗೂ ಎರಡು ಮುಖಗಳಿವೆ. ಒಂದು ಐಹಿಕ ಮತ್ತೊಂದು ಆಮುಷ್ಮಿಕ. ನಾಣ್ಯದ ಒಂದು ಮುಖ ಸವಕಲಾಗಿದ್ದು, ಇನ್ನೊಂದು ಚೆನ್ನಾಗಿದ್ದರೂ ಸಹ ಅದು ಹೇಗೆ ಚಲಾವಣೆಗೆ ಬರುವುದಿಲ್ಲವೋ ಅಂತೆಯೇ ಮಾನವನ ಜೀವಿತದಲ್ಲಿ ಇಹಪರಗಳೆರಡರಲ್ಲಿ ಯಾವುದೊಂದು ಹಿಂದುಳಿದರೂ ಆತ ಪರಿಪೂರ್ಣನಾಗಲಾರ. ಎರಡರ ಬೆಳವಣಿಗೆಯೂ ಸಮಾನವಾಗಿ, ಸಮಪರ್ಕವಾಗಿ ನಡೆಯಬೇಕು. ಇವುಗಳಲ್ಲಿ ಒಂದನ್ನು ಬಿಟ್ಟು ಇನ್ನೊಂದು ನಿಸ್ಸಹಾಯಕ ಹಾಗೂ ನಿರರ್ಥಕ.

ಇಹಪರಗಳೆರಡರ ಸಾಧನೆಗೂ ನಮಗೆ ದೈವದತ್ತವಾಗಿರುವ ಏಕೈಕ ಉಪಕರಣವೆಂದರೆ 'ನಮ್ಮ ಶರೀರವೇ'. ಆದುದರಿಂದಲೇ,

ಶರೀರಮಾದ್ಯಂ ಖಲು
ಧರ್ಮಸಾಧನಮ್ |

–ಎನ್ನುತ್ತದೆ ಶಾಸ್ತ್ರ. ಅಂದರೆ ಸಕಲ ಧರ್ಮಸಾಧನೆಗೂ ಈ ಶರೀರವೇ ಮೂಲ. ಇಲ್ಲಿ ಶರೀರವೆಂದರೆ ಸುದೃಢವಾದ, ಆರೋಗ್ಯಯುಕ್ತವಾದ ಶರೀರವೆಂದೇ ಅರ್ಥ. ಇದೇ ಮಾತನ್ನು ಉಪನಿಷತ್ತಿನಲ್ಲಿಯೂ ಸಹ ಕಾಣುತ್ತೇವೆ.

"ಜೀವಂ ಭದ್ರಾಣಿ ಪಶ್ಯತು"

ಅಂದರೆ ಜೀವವನ್ನು ಭದ್ರವಾಗಿ ನೋಡಿಕೊ. ಇಲ್ಲಿ 'ಜೀವ'ವೆಂದರೆ ಸ್ವಸ್ಥಶರೀರವೆಂದೇ ಅರ್ಥ. ಯೋಗಕ್ಕಾಗಲಿ, ಭೋಗಕ್ಕಾಗಲಿ ಸ್ವಸ್ಥಶರೀರದ ಅಗತ್ಯವನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಆರೋಗ್ಯಶಾಲಿಗಳಿಂದ ಮಾತ್ರವೇ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಲು ಸಾಧ್ಯವೇ ವಿನಾ ದುರ್ಬಲರಿಂದ, ರೋಗಿಗಳಿಂದ ಎಂದಿಗೂ ಸಾಧ್ಯವಿಲ್ಲ. ಇದನ್ನೇ ಆಯುರ್ವೇದಾಚಾರ್ಯರಾದ ಚರಕರು,

ಧರ್ಮಾರ್ಥಕಾಮ ಮೋಕ್ಷಾಣಾಂ
ಆರೋಗ್ಯಂ ಮೂಲಮುತ್ತಮಮ್ |

–ಎಂದು ಹೇಳಿದ್ದಾರೆ. ಅಲ್ಲದೆ ಬಲಹೀನನಿಂದ ಆತ್ಮಸಾಕ್ಷಾತ್ಕಾರವೂ ಸಹ ಸಾಧ್ಯವಿಲ್ಲವೆಂಬ ಮಾತನ್ನು ಮುಂಡಕೋಪನಿಷತ್ತಿನಲ್ಲಿ ಕಾಣುತ್ತೇವೆ.

ನಾಯಮಾತ್ಮಾ ಬಲಹೀನೇನ ಲಭ್ಯಃ

–ಇಂತಹ ಬಲದಲ್ಲಿ ನಾನಿದ್ದೇನೆಂದು ಭಗವಂತನು ಗೀತೆಯಲ್ಲಿ ಉದ್ಘೋಷಿಸಿದ್ದಾನೆ. "ಬಲಂ ಬಲವತಾಮಸ್ಮಿ ಕಾಮರಾಗ ವಿವರ್ಜಿತಮ್ |"

**ಶ್ರೀ ಕೆ. ಕೇಶವಮೂರ್ತಿ**

ಪ್ರಪಂಚದಲ್ಲಿ ಹುಟ್ಟಿದ ಯಾರೂ ತಾನು ರೋಗಿಯಾಗಿರಬೇಕು, ದುರ್ಬಲನಾಗಿರಬೇಕು ಎಂದು ಇಚ್ಛಿಸುವುದಿಲ್ಲ. ಇದಕ್ಕೆ ಪ್ರತಿಯಾಗಿ ಪ್ರತಿಯೊಬ್ಬನೂ ತಾನು ಆರೋಗ್ಯವಂತನೂ, ದೃಢಕಾಯನೂ ಆಗಿರಬೇಕೆಂದು ಬಯಸುತ್ತಾನೆ. ಆದರೆ ಇದು ಕೇವಲ ಬಯಸಿದ ಮಾತ್ರಕ್ಕೇ ಸಿಗುವ ವಸ್ತುವಲ್ಲ. ಇದಕ್ಕೆ ಶಾಸ್ತ್ರೀಯವಾದ ಸಾಧನೆ ಅತ್ಯಗತ್ಯ. ಅಂತಹ ಸಾಧನೆಯೆಂದರೆ 'ಯೋಗಾಸನಗಳೇ' ಎಂದು ನಿರ್ವಿವಾದವಾಗಿ ಹೇಳಬಹುದು.

ಯೋಗಾಸನಗಳು ಪಾತಂಜಲಪ್ರೋಕ್ತ ಅಷ್ಟಾಂಗಯೋಗದ ಮೂರನೇ ಹಂತ. 'ಆಸನ' ವೆಂದರೇನೆಂಬುದನ್ನು 'ಯೋಗಸೂತ್ರ'ವು

"ತತ್ರಸ್ಥಿರ ಸುಖಮಾಸನಮ್ |"

ಎಂದು ಹೇಳಿದೆ. ಅಂದರೆ ಸ್ಥಿರವೂ ಸುಖವೂ ಆಗಿರುವುದೇ ಆಸನ. ಆಸನವೆಂದರೆ ಅಂಗದ ವಿನ್ಯಾಸ. ದೇಹಾರೋಗ್ಯಕ್ಕಾಗಿ ಮಾಡುವ ಆಸನಗಳು 'ಹಠಯೋಗ' ದಲ್ಲಿ ಉಕ್ತವಾಗಿದೆ.

ಇಂದು ನಮಗೆ ಯೋಗಾಸನಗಳ ಅಗತ್ಯ ಹಿಂದಿಗಿಂತಲು ಅಧಿಕವಾಗಿದೆ. ಇದಕ್ಕೆ ಕಾರಣ ಇಂದಿನ ವಿಜ್ಞಾನಯುಗದಲ್ಲಿ ನಾವು ಸೇವಿಸುತ್ತಿರುವ ನಿಸ್ಸತ್ತ್ವ ಆಹಾರ, ಕುಡಿಯುತ್ತಿರುವ ಕಲ್ಮಶಯುಕ್ತವಾದ ನೀರು, ಉಸಿರಾಡುವ ವಿಷಯುಕ್ತಗಾಳಿ ಹಾಗೂ ನವನಾಗರಿಕತೆಯ ಹೆಸರಿನಲ್ಲಿ ಆಚರಿಸುತ್ತಿರುವ ಕೆಲವು ಅನಪೇಕ್ಷಣೀಯ ಆಚರಣೆಗಳು– ಇವುಗಳಿಂದಾಗಿ ಹಲವು ಬಗೆಯ ರೋಗಗಳಿಗೆ ತುತ್ತಾಗುತ್ತಿದ್ದೇವೆ. ಅಲ್ಲದೆ

ಪೂರ್ವಜನ್ಮ ಕೃತಂ ಪಾಪಂ
ರೋಗ ರೂಪೇಣ ಪೀಡತೇ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

–ಎಂಬ ಆರ್ಯವಾಣಿಯಂತೆ ಕರ್ಮವಶದಿಂದಲೂ ರೋಗಗ್ರಸ್ತರಾಗುತ್ತೇವೆ. ಇವುಗಳ ನಿವಾರಣೆಗೆ ಹಾಗೂ ತಡೆಗಟ್ಟುವಿಕೆಗೆ ಯೋಗಾಸನಗಳ ನಿತ್ಯಾಭ್ಯಾಸ ಅತಿಮುಖ್ಯ.

ಯೋಗಾಸನಗಳನ್ನು ಕ್ರಮವರಿತು ಆಸಕ್ತಿಯಿಂದ ಅಭ್ಯಸಿಸಿದರೆ ದೇಹದಲ್ಲಿ ಲವಲವಿಕೆ, ಮನಸ್ಸಿನಲ್ಲಿ ಉಲ್ಲಾಸ ಮೂಡುವುದರ ಜತೆಗೆ ಅಂಡವಾಯು, ಅತಿಸಾರ, ಆಮ್ಲಪಿತ್ತ, ಉದರಶೂಲೆ, ಉಬ್ಬಸ, ಎದೆನೋವು, ಕಂಠಗ್ರಂಥಿ, ಮಹೋದರ, ಮಧುಮೇಹ, ತಲೆ ಶೂಲೆ, ಉದರಬೇನೆ. ನಿಶ್ಶಕ್ತಿ, ಮರೆವು, ಮೂಲವ್ಯಾಧಿ, ಸಂಧಿವಾತ, ಸ್ವಪ್ನಸ್ಖಲನ, ರಾಜಯಕ್ಷ್ಮ, ರಜಸ್ವಲಾ ಅಕ್ರಮ, ರಕ್ತಹೀನತೆ, ಪಾರ್ಶ್ವವಾಯು. ದುರ್ಗಂಧಶ್ವಾಸ, ಕರುಳು ಬಾಲರೋಗ,ಬೆನ್ನುನೋವು, ರಕ್ತದ ಒತ್ತಡ, ಉಸಿರಾಟಕ್ಕೆ ತೊಂದರೆ, ನೆಗಡಿ, ಕೆಮ್ಮು, ಮಲಬದ್ಧತೆ, ಬಹುಮೂತ್ರ, ಹೃದಯವಿಸ್ತರಣ, ಗರ್ಭಾಶಯದ ಸ್ಥಾನಪಲ್ಲಟ, ಅಗ್ನಿಮಾಂದ್ಯ, ಅಪಸ್ಮಾರ, ಕಣ್ಣುಬೇನೆ, ಆಯಾಸ, ಸ್ಥೂಲಶರೀರ, ತಲೆಸುತ್ತು, ಗೂನುಬೆನ್ನು, ನಿರ್ನಿದ್ರತೆ, ಅತಿ ತಲೆನೋವು, ಹೃದಯಾದಿಸ್ಪಂದನ, ಪೋಲಿಯೊ, ಕಟಿವಾಯು, ವೀರ್ಯಸ್ರಾವವೇ ಆದಿಯಾಗಿ ಎಲ್ಲ ಘೋರ ರೋಗಗಳೂ ನಿವಾರಣೆಯಾಗುತ್ತವೆ. ಆರೋಗ್ಯವಂತರು ಯೋಗಾಸನಗಳನ್ನು ಅಭ್ಯಸಿಸುವುದರಿಂದ ಸಂಭಾವ್ಯವಾದ ಈ ಯಾವ ರೋಗಗಳಿಗೂ ಅವರು ಒಳಗಾಗುವುದಿಲ್ಲ. ಈ ಮಾತು ಕೇವಲ ಉತ್ಪ್ರೇಕ್ಷೆಯಲ್ಲ. ಈ ಮಾತಿಗೆ ಶ್ವೇತಾಶ್ವತರೋಪನಿಷತ್ತಿನ ಆಧಾರವಿದೆ.

ನ ತಸ್ಯರೋಗಾಃ ನ ಜರಾ
ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿ
ಮಯಂ ಶರೀರಂ ಲಘುತ್ವಂ ಆರೋಗ್ಯಂ
ಅಲೋಲುಪತ್ವಂ ವರ್ಣ
ಪ್ರಸಾದಂ ಸ್ವರಸೌಷ್ಠವಂ ಚ ಗಂಧಃ
ಶುಭಃ ಮೂತ್ರ ಪುರೀಷಮಲ್ಪಂ
ಯೋಗಪ್ರವೃತ್ತಿಂ ಪ್ರಥಮಾಂ ವದಂತಿ|

ಅಂದರೆ ಯೋಗಾಸನಗಳನ್ನು ಮಾಡುವುದರಿಂದ ರೋಗಗಳು ಬರುವುದಿಲ್ಲ, ಮುದಿತನವಿಲ್ಲ, ಸಾವು ಇಲ್ಲ (ಈ ಮಾತು ಉತ್ಪ್ರೇಕ್ಷೆಯಾದರೂ ಅನಾಯಾಸ ಮರಣವೆಂಬುದು ಇದರ ತಾತ್ಪರ್ಯ). ಶರೀರವು ಯಾವಾಗಲೂ ಲಘುವಾಗಿರುತ್ತದೆ, ಸದಾ ಆರೋಗ್ಯ ಇರುತ್ತದೆ. ದುರಾಸೆಗಳು ಇರುವುದಿಲ್ಲ, ಮೈಯಲ್ಲಿ ಹೊಳಪು ಇರುತ್ತದೆ. ಒಳ್ಳೆಯ ವಾಕ್ಪಟುತ್ವ ಬರುತ್ತದೆ. ಮೈಯಲ್ಲಿ ಕೆಟ್ಟವಾಸನೆ ಇರುವುದಿಲ್ಲ. ಸರಿಯಾಗಿ ಯೋಗ ಸಾಧನೆ ಮಾಡಿದವರಿಗೆ ಈ ಫಲಗಳು ಲಭಿಸುತ್ತವೆ.

ಆಸನಗಳ ಸಂಖ್ಯೆ ಅಪಾರವಾಗಿರುವುದರಿಂದ ನಿತ್ಯದ ಆಚರಣೆಗಾಗಿ ಮಲ್ಲಾಡಿಹಳ್ಳಿಯ ಶ್ರೀ ಶ್ರೀ ರಾಘವೇಂದ್ರ ಗುರೂಜಿಯವರು ಕೇವಲ ಹದಿನೆಂಟು ಆಸನಗಳನ್ನು ಶಿಫಾರಸು ಮಾಡಿದ್ದಾರೆ. ಕೇವಲ ಒಂದು ಗಂಟೆಯ ಅಭ್ಯಾಸದಿಂದ ಜೀವನಪರ್ಯಂತ ನಿರೋಗಿಗಳಾಗಿರಬಹುದು. ಇದರ ಜತೆಗೆ 'ಸೂರ್ಯನಮಸ್ಕಾರ'ವು ಅತಿ ಶ್ರೇಷ್ಠವಾದ ಆಚರಣೆ. 'ಆರೋಗ್ಯಂ ಭಾಸ್ಕರಾದಿಚ್ಛೇತ್' ಎಂಬ ಶ್ರುತಿವಾಕ್ಯವೇ ಇದಕ್ಕೆ ಆಧಾರ. ಸೂರ್ಯನಮಸ್ಕಾರದಿಂದ ಆಪಾದಮಸ್ತಕದವರೆಗೆ ವ್ಯಾಯಾಮವು ದೊರೆಯುವುದೇ ಅಲ್ಲದೆ ಜತೆಯಲ್ಲಿ 'ಸೂರ್ಯೋಪಾಸನೆ'ಯೂ ಆಗುತ್ತದೆ.

ಇತ್ತೀಚಿನ ದಿನಗಳಲ್ಲಿ ಯೋಗಾಸನ ಶಿಬಿರಗಳನ್ನು ಕೆಲವು ಯೋಗಸಂಸ್ಥೆಗಳು ಏರ್ಪಡಿಸುತ್ತಿರುವುದು ಸ್ತುತ್ಯರ್ಹ. ಯೋಗಾಸನಗಳನ್ನು ಯೋಗತಜ್ಞರ ಮಾರ್ಗದರ್ಶನದಲ್ಲೇ ಕಲಿಯಬೇಕೇ ವಿನಾ ಖಂಡಿತ ಪುಸ್ತಕಾವಲೋಕನದಿಂದಲ್ಲ. ಇದರಿಂದ ಕೆಡುಕೇ ವಿನಾ ಅನುಕೂಲವಿಲ್ಲ.

ಅಂತೂ ಯೋಗಾಸನಗಳು ಕೇವಲ ಋಷಿಮುನಿಗಳಿಗೆ ಮಾತ್ರ ಸಂಬಂಧಿಸಿದ್ದು, ಪ್ರಾಪಂಚಿಕರಿಗೆ ಅಲ್ಲ ಎಂಬ ಮೂಢನಂಬಿಕೆ ನಿವಾರಣೆಯಾಗಿ ಅವು ಮಾನವರೆಲ್ಲರ ಸ್ವತ್ತು; ಎಂದು ನಂಬುತ್ತ ನಮ್ಮದಲ್ಲವೆಂದು ದೂರೀಕರಿಸುತ್ತಿರುವ ಈ ಮಹಾವಿದ್ಯೆಯನ್ನು ಎಲ್ಲರೂ ತಮ್ಮದಾಗಿಸಿಕೊಂಡು ನಿರೋಗಿಗಳಾಗಿ ಬಾಳಿದರೆ ಈ ಲೇಖನದ ಉದ್ದೇಶ ಸಾರ್ಥಕವಾದೀತು.

ಉತ್ತಿಷ್ಠತ ಜಾಗ್ರತ
ಪ್ರಾಪ್ಯವರಾನ್ನಿಬೋಧತ




# ಅತ್ಯಂತ ಉಪಯುಕ್ತ ಪ್ರವೇಶಿಕೆ

ಶ್ರೀಮದ್ಧರಿ ಕಥಾಮೃತಸಾರ ಪ್ರವೇಶಿಕೆ
ಲೇ: ಆರ್ ಎಚ್. ಕುಲಕರ್ಣಿ
ಪ್ರ: ಸಾಹಿತ್ಯ ಸದನ ಪ್ರಕಾಶನ
ಎಂ.ಎಸ್.ಕೆ. ಮಿಲ್ ರಸ್ತೆ
ಗುಲ್ಬರ್ಗ–585 102.
ಪುಟ: 28+262 ಬೆಲೆ: 16 ರೂ

ಕರ್ನಾಟಕ ಹರಿದಾಸ ಸಾಹಿತ್ಯ ಪ್ರಪಂಚದಲ್ಲಿ ಜಗನ್ನಾಥದಾಸರು ವಿರಚಿಸಿದ 'ಶ್ರೀ ಹರಿಕಥಾಮೃತಸಾರ' ಒಂದು ಮೇರು ಕೃತಿಯಾಗಿದೆ. ತತ್ತ್ವಜ್ಞಾನ ಪಿಪಾಸುಗಳಿಗೆ ಇದು ಅಣುಸುಧೆ

ಸಾಮಾನ್ಯವಾಗಿ ಸಂಸ್ಕೃತ ಗ್ರಂಥಗಳಿಗೆ ಪ್ರಾಂತೀಯ ಭಾಷೆಗಳಲ್ಲಿ ವ್ಯಾಖ್ಯಾನಗಳಿರುವುದು ಸಹಜ. ಇದಕ್ಕೆ ಭಿನ್ನವಾದ ರೀತಿಯಲ್ಲಿ ಕನ್ನಡ ಷಟ್ಪದಿಯಲ್ಲಿ ನಿರ್ಮಿತವಾದ ಹರಿಕಥಾಮೃತಸಾರಕ್ಕೆ ಸಂಸ್ಕೃತದಲ್ಲಿ ಮೂರು ವ್ಯಾಖ್ಯಾನಗಳಿವೆ. ಇದರಿಂದಲೇ ಈ ಗ್ರಂಥದ ಹಿರಿಮೆಯು ವ್ಯಕ್ತವಾಗುವುದು.

ದೊಡ್ಡದಾದ ಮಾನವಜನ್ಮ ಪಡೆದ ಜೀವಿಗೆ ಅದನ್ನು ಸಾರ್ಥಕಗೊಳಿಸಲು ಬೇಕಾದ ಸಕಲ ಸಾಧನ ಪ್ರಕ್ರಿಯೆಯೂ ಈ ಹರಿಕಥಾಮೃತಸಾರದಲ್ಲಿ ಅಭಿವರ್ಣಿತವಾಗಿದೆ. ಈ ಅಪೂರ್ವ ಗ್ರಂಥದ ಸಾರಾಮೃತವನ್ನು ಅನೇಕರು ಅನುಭವಿಸಿದ್ದಾರೆ, ಇಂದಿಗೂ ಅನುಭವಿಸುತ್ತಲಿದ್ದಾರೆ.

ಮಾನ್ಯರಾದ ಆರ್. ಎಚ್. ಕುಲಕರ್ಣಿಯವರು ತಮ್ಮದೇ ಆದ ವಿಶಿಷ್ಟರೀತಿಯಲ್ಲಿ ಈ ಗ್ರಂಥದ ವೈಶಿಷ್ಟ್ಯವನ್ನು ವರ್ಣಿಸಿದ್ದಾರೆ. ಈ ಗ್ರಂಥ ಅನೇಕ ವಿಷಯಗಳಿಗೆ ಆಕರವೆನ್ನುವುದನ್ನು ಉತ್ತಮವಾದ ರೀತಿಯಲ್ಲಿ ವಿವರಿಸಿದ್ದಾರೆ.

ಹರಿಕಥಾಮೃತಸಾರದಲ್ಲಿರುವ ಸಮಾಜವಾದ, ಸಮತಾವಾದ ಹಾಗೂ ವಿಜ್ಞಾನ ಇವುಗಳನ್ನು ಇಂದಿನ ಜನಾಂಗಕ್ಕೆ ಮನದಟ್ಟಾಗುವಂತೆ ವಿವರಿಸುವಲ್ಲಿ ಕುಲಕರ್ಣಿಯವರ ಶ್ರಮ ಫಲಿಸಿದೆ.

ಪೀಠಿಕೆಯಲ್ಲಿ ದಾಸಸಾಹಿತ್ಯದ ಉಗಮ, ಅದರಲ್ಲಿ ಬರುವ ವಿಷಯಗಳು ಮತ್ತು ಪ್ರಕಾರಗಳನ್ನು ವಿಶದೀಕರಿಸಿ,ವಿಶ್ವಸಾಹಿತ್ಯವೆನಿಸಿದ ದಾಸಸಾಹಿತ್ಯದ ಕಿರುಪರಿಚಯವನ್ನು ಮಾಡಿಕೊಟ್ಟಿರುವರು.

ಜಗನ್ನಾಥದಾಸರು ರಚಿಸಿದ ಹರಿಕಥಾಮೃತಸಾರ ಒಟ್ಟು 32 ಸಂಧಿಗಳಲ್ಲಿ ವಿಭಕ್ತವಾಗಿದೆ. ಕುಲಕರ್ಣಿಯವರು ಸಹ ತಮ್ಮ ಪ್ರವೇಶಿಕೆಯಲ್ಲಿ ವಿಷಯಗಳನ್ನು 32 ವಿಧವಾಗಿ ವಿಂಗಡಿಸಿ, 32 ಸಂಖ್ಯೆಯ ವೈಶಿಷ್ಟ್ಯವನ್ನು ವಿವರಿಸಿರುವರು.

ಇಂದಿನ ಸಮಾಜಕ್ಕೆ ಹರಿಕಥಾಮೃತಸಾರ ಒಂದು ಕೈಪಿಡಿ ಎನ್ನುವುದನ್ನು ಲೇಖಕರು, ಉತ್ತಮವಾದ ರೀತಿಯಲ್ಲಿ ಸಮರ್ಥಿಸಿರುವರು.

ಒಟ್ಟಿನಲ್ಲಿ ಹೇಳುವುದಾದರೆ ಹರಿಕಥಾಮೃತಸಾರವನ್ನನುಭವಿಸಲು ಕುಲಕರ್ಣಿಯವರ ಶ್ರೀಮದ್ಧರಿಕಥಾಮೃತಸಾರ ಪ್ರವೇಶಿಕೆ ಅತ್ಯಂತ ಉಪಯುಕ್ತವಾಗಿದೆ.

**—ಕೆ. ಅಪ್ಪಣ್ಣಾಚಾರ್ಯ.**

---

(15ನೇ ಪುಟದಿಂದ)

ಲಕ್ಷ್ಮೀನೃಸಿಂಹ ಕರಾವಲಂಬ ಸ್ತೋತ್ರಂ ಮತ್ತು ಪ್ರಪತ್ತಿ, ದಯಾಸಾಗರ ಶತಕಂ, ಪಂಚಾಮೃತ ಸ್ತೋತ್ರಂ, ತಿರುಪ್ಪಾವೈ ಸುಬೋಧಿನಿ ವ್ಯಾಖ್ಯಾನ ಇತ್ಯಾದಿ, (10) ರಾಜಗೋಪುರ ನಿರ್ಮಾಣ: ಅಹೋಬಿಲ, ಅದನೂರು ಮಾನಮಾಮಲೈ ಕ್ಷೇತ್ರಗಳಲ್ಲಿ ಗೋಪುರಗಳ ನಿರ್ಮಾಣ ಮಾಡಿ ನುರಿತ ಜ್ಞಾನ ಮತ್ತು ಅನುಭವವನ್ನು ಪಡೆದಿದ್ದಾರೆ. ಇವರ 85ನೆ ಸಂವತ್ಸರದಲ್ಲಿ ಶ್ರೀರಂಗದ ರಾಜಗೋಪುರದ ನಿರ್ಮಾಣಕ್ಕೆ ಕೈಯಿಟ್ಟರು. "ಇದರಲ್ಲಿ ನನ್ನದೇನಿಲ್ಲ ಅವನೇ ಮಾಡಿಸಿದ" ಎಂದು ಅವರು ಹೇಳಿದರು. "ಈ ನಿರ್ಮಾಣಕ್ಕೆ ಹಣ ಸೌಲಭ್ಯಾದಿಗಳನ್ನು ಒದಗಿಸಲು ನಮ್ಮ ಅನುಗ್ರಹವಿದೆ ಎಂದು ದಿವ್ಯದಂಪತಿಗಳು ಕನಸಿನಲ್ಲಿ ಹೇಳಿದರು". ಎಂದು ಸ್ವಾಮಿಗಳು ತಮಗೂ ದಿವ್ಯದಂಪತಿಗಳಿಗೂ ಕನಸಿನಲ್ಲಿ ಆದ ಸಂಭಾಷಣೆಯನ್ನು ಉಪನ್ಯಾಸದಲ್ಲಿ, ವಿದ್ವದ್ಗೋಷ್ಠಿಯಲ್ಲಿ ಮತ್ತು ಸಾರ್ವಜನಿಕ ಸಭೆಯಲ್ಲಿ ಹೇಳಿದಾಗ ಸಭಿಕರೆಲ್ಲರೂ ಚಕಿತರಾದರು ಮತ್ತು ಸಂತೋಷಪಟ್ಟರು. ಈ ಗೋಪುರವು ಏಷ್ಯಾದಲ್ಲೇ ಅತ್ಯಂತ ಎತ್ತರ ಹಾಗೂ ಬೃಹದಾಕಾರವಾದುದು ಇದಕ್ಕೆ ತಗುಲಿದ ವೆಚ್ಚ ಸುಮಾರು 1.5 ಕೋಟಿ ರೂಪಾಯಿಗಳು. ಇದರಲ್ಲಿ ಅಹೋಬಿಲ ಸ್ವಾಮಿಗಳ ಕೊಡುಗೆ 40 ಲಕ್ಷ ರೂಪಾಯಿ. 1987 ಚೈತ್ರ ಮಾಸದಲ್ಲಿ ಗೋಪುರ ಸಂಪ್ರೋಕ್ಷಣೆಯಾಗಿ ವಿಶ್ವಕ್ಕೆ ಕೀರ್ತಿದಾಯಕವಾಯಿತು. ಆ ಸಂದರ್ಭದಲ್ಲಿ ಮಹಾಜನರು "ಸಾಮಂತರು ಮಾಡದ್ದನ್ನು ಸ್ವಾಮಿ ಮಾಡಿಬಿಟ್ಟರಲ್ಲ" ಎಂದು ಉದ್ಗಾರವೆತ್ತಿದರು. ಇವರನ್ನು 'ಗೋಪುರಸ್ವಾಮಿ' ಗಳೆಂದು ಜನಸ್ತೋಮ ಕರೆಯುವುದರಲ್ಲಿ ಆಶ್ಚರ್ಯವೇನಿಲ್ಲ.

★

# ಶ್ರೀ ವೇಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೇಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೇಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಕೌಮುದೀ ಮಹೋತ್ಸವದ ಕರ್ತೃ ವಿಜಯಾಂಕಾ

ಪವಿತ್ರವಾದ ಭರತಖಂಡದಲ್ಲಿ ಪ್ರಾಚೀನ ಕಾಲದಿಂದಲೂ ಅನೇಕ ಜನ ಕವಿಗಳೂ, ಕವಯಿತ್ರಿಗಳೂ ತಮ್ಮ ಜ್ಞಾನಧಾರೆಯನ್ನು ರಾಷ್ಟ್ರಕ್ಕೆ ಸಮರ್ಪಿಸಿ ಕೃತಾರ್ಥರಾಗಿದ್ದಾರೆ. ದೇಶದಲ್ಲಿನ ಭಾಷೆಗಳು ಸೊರಗದೆ ಅದನ್ನು ಪುಷ್ಟೀಕರಿಸಿ ಶಾಶ್ವತವಾಗಿ ಜೀವಂತವಾಗಿರಿಸಿ ಕಿರಿಯರಿಗೆ ಮಾರ್ಗದರ್ಶನ ಮಾಡುವಂತಹ ಗುಣವು ಕವಿಗಳಿಗೆ ನೈಜವಾಗಿ ಬಂದಿದೆ. ನಮ್ಮ ಪವಿತ್ರವಾದ ಭಾಷೆಗಳಲ್ಲಿ ಸಂಸ್ಕೃತ ಸಾಹಿತ್ಯವನ್ನು ತಿರುವಿ ನೋಡಿದರೆ ನಮಗೆ ವಿಜಯಾಂಕೆಯ ಸವಿ ನೆನಪು ಆಗದಿರದು. ಈಕೆಯು ಚಾಲುಕ್ಯ ರಾಜ ಮನೆತನದ ಚಕ್ರವರ್ತಿ ಎರಡನೇ ಪುಲಕೇಶಿಯ ಸೊಸೆಯಾಗಿದ್ದಳು. ಚಂದ್ರಾದಿತ್ಯನ ಪತ್ನಿ. ಮಾವ ಪುಲಕೇಶಿಯ ಸಾಹಿತ್ಯ ಪ್ರತಿಭೆ ಚಂದ್ರಾದಿತ್ಯನ ಸದ್ಗುಣಗಳು ಈ ಕವಯಿತ್ರಿಗೆ ರಕ್ತ ಸಂಬಂಧದಂತೆ ಬೆಳೆದು ಬಂತು. ಸಾತ್ತ್ವಿಕ ರಾಜ ಮನೆತನದಿಂದ ಚಾಲುಕ್ಯ ಬಾದಾಮಿಯು ತುಂಬಿತುಳುಕುತ್ತಿರುವಂತೆ ಸಾಮಂತವಾಡಿಯ ವ್ಯವಹಾರಗಳನ್ನು ನೋಡಿಕೊಳ್ಳುವ ಜವಾಬ್ದಾರಿಯು ವಿಜಯಾಂಕಳ ಪಾಲಿಗೆ ಬಂದಿತು

ಎರಡನೇ ಪುಲಕೇಶಿಯ ಕಾಲವು ಕೇವಲ ದಕ್ಷಿಣ ಭಾರತದಲ್ಲಿ ಮಾತ್ರ ಹೆಸರುವಾಸಿಯಾಗಿರದೆ ಇಡೀ ಭರತಖಂಡದಲ್ಲಿ ಹೆಸರಾದದ್ದು. ಪುಲಕೇಶಿಯ ರಾಜ್ಯಭಾರ ಆಡಳಿತ ವೈಖರಿ ಇಡೀ ಚರಿತ್ರೆಯಲ್ಲೇ ಹೆಸರುವಾಸಿಯಾಗಿದೆ. ಅಂದಿನ ನೆರೆಯ ರಾಜ್ಯಗಳ ರಾಜರುಗಳಾದ ಕರ್ನಾಟಕದ ಗಂಗರು, ಪಲ್ಲವರು, ಕದಂಬರು, ಪಾಂಡ್ಯ, ಚೋಳರು, ಚಾಲುಕ್ಯರ ಒಡೆತನವನ್ನು ಗೌರವಿಸಿದವರಾಗಿದ್ದರು. ಪುಲಕೇಶಿಗೆ ತಕ್ಕ ವೈರಿ ಎಂದರೆ ಉತ್ತರ ಹಿಂದೂಸ್ಥಾನದ ಹರ್ಷವರ್ಧನನು. ಬಲಿಷ್ಠನಾದ ಹರ್ಷನನ್ನು ಸೋಲಿಸಿ "ಪರಮೇಶ್ವರ" ಎಂಬ ಬಿರುದನ್ನು ಪುಲಕೇಶಿಯು ಧರಿಸಿದನು. ಇವನ ಶ್ರೇಷ್ಠ ಆಡಳಿತದ ಕಾಲದಲ್ಲಿ ಕರ್ನಾಟಕದ ಕೀರ್ತಿಯು ಶಿಖರಕ್ಕೇರಿತು. ಇಂತಹ ಸಾತ್ತ್ವಿಕ, ಧಾರ್ಮಿಕ ದಕ್ಷ ರಾಜ ಮನೆತನದಲ್ಲಿ ಬೆಳೆದ ವಿಜಯಾಂಕಾ ಸಂಸ್ಕೃತದಲ್ಲಿ ಸಾಹಿತ್ಯಗಳನ್ನು ರಚಿಸಿ ಸರಳರೀತಿಯಲ್ಲಿ ಜನರ ಮನಮುಟ್ಟುವಂತೆ ಶ್ರಮಿಸಿದ ಕವಯಿತ್ರಿಗಳಲ್ಲಿ ಒಬ್ಬಳಾಗಿದ್ದಾಳೆ. ಮಾವ ಪುಲಕೇಶಿಯ ಹಾಗೂ ಪತಿ ಚಂದ್ರಾದಿತ್ಯನ ವ್ಯಕ್ತಿತ್ವದ ಪ್ರಭಾವವು ವಿಜಯಾಂಕೆಯ ಮೇಲೆ ಬೆಳಕು ಬೀರಿತ್ತೆನ್ನುವುದು ಅವಳ ಬರಹಗಳಿಂದಲೇ ತಿಳಿಯುತ್ತದೆ.



ವಿಜಯಾಂಕೆಯು ಸಂಸ್ಕೃತದಲ್ಲಿ "ಕೌಮುದೀಮಹೋತ್ಸವ" ನಾಟಕವನ್ನು, ಮೂವತ್ತೆರಡು ಬಿಡಿಯ ಕಾವ್ಯಗಳನ್ನು ರಚಿಸಿ ತನ್ನ ಸಾಹಿತ್ಯ ಪ್ರತಿಭೆಯನ್ನು ಮೆರೆಯಿಸಿದ್ದಾಳೆ. "ವೈದರ್ಭಿ" ಶೈಲಿಯಲ್ಲಿ ರಚಿಸಿದ ಈ ಕಾವ್ಯಗಳು ಚಿಕ್ಕ ಚಿಕ್ಕ ಕೃತಿಗಳಾಗಿದ್ದರೂ ಆಕೆ ಸತ್ತ್ವಯುತವಾಗಿ, ಅಚ್ಚುಕಟ್ಟಾಗಿ ರಚಿಸಿದ್ದಾಳೆ. ಸಾತ್ತ್ವಿಕ ರಾಜ ಮನೆತನದಲ್ಲಿ ಹುಟ್ಟಿ ತನ್ನ ಪ್ರತಿಭೆಯಿಂದ ಪ್ರಜ್ವಲಿಸಿದ ಈ ಕವಯಿತ್ರಿಯನ್ನು ಸಂಸ್ಕೃತದ ಅನೇಕ ಕವಿಗಳು ಶ್ಲಾಘಿಸಿದ್ದಾರೆ.

"ಕೌಮುದೀಮಹೋತ್ಸವ" ನಾಟಕ ಕಥಾವಸ್ತುವಿನಲ್ಲಿ ಆಕೆಯ ಕೌಟುಂಬಿಕ ಜೀವನ ಹಾಗೂ ಸಾಮಾಜಿಕ ಧಾರ್ಮಿಕ ಭಾವನೆಗಳಿಗೆ ಮಹತ್ವವನ್ನು ಕೊಟ್ಟಿದ್ದಾಳೆ. ಸಂಸಾರ ಪ್ರೇಮ ಹಾಗೂ ರಾಜಕೀಯ ಸನ್ನಿವೇಶಗಳ ಚಿತ್ರಣವನ್ನು ಸುಂದರವಾಗಿ ಚಿತ್ರಿಸಿದ್ದಾಳೆ. ಸಂಸ್ಕೃತದಲ್ಲಿ ರಾಜಕೀಯ ಹಾಗೂ ಸಾಂಸಾರಿಕ ಪ್ರೇಮವನ್ನು ಆಧರಿಸಿ ಬರೆದ ನಾಟಕಗಳು ಹಲವು ಇದ್ದರೂ ಅವೆರಡನ್ನೂ ಸಮಾನ ರೀತಿಯಲ್ಲಿ ಹಂಚಿ ಹೊಂದಿಸಿಕೊಂಡು ಬರೆದ ನಾಟಕಗಳು ವಿರಳ. ವಿಜಯಾಂಕೆಯು ತನ್ನ ಜೀವಿತದ ಕಾಲದ ಸನ್ನಿವೇಶವನ್ನೇ ಚಿತ್ರಿಸಿ ಕೃತಿಯನ್ನು ರಚಿಸಿದ್ದಾಳೆ.

ನಾಟಕಕಾರ್ತಿಯು ಕೌಮುದೀ ಮಹೋತ್ಸವ ನಾಟಕದಲ್ಲಿ ಮಗಧ ದೇಶದ ರಾಜಧಾನಿ ಪಾಟಲೀಪುತ್ರವನ್ನು ಕಥಾಕ್ಷೇತ್ರವನ್ನಾಗಿರಿಸಿ, ಅಲ್ಲಿಯ ದೊರೆ ಸುಂದರವರ್ಮ ಮತ್ತು ರಾಜಕುಮಾರ ಕಲ್ಯಾಣವರ್ಮರ ಜೀವನ ವಿಷಯವಾಗಿ ಬರೆದಿದ್ದಾಳೆ. ಸುಂದರ ವರ್ಮನ ವಿರುದ್ಧ ಸೈನಿಕರು ದಂಗೆ ಎದ್ದು ಯುದ್ಧಮಾಡಿ ಸುಂದರ ವರ್ಮನನ್ನು ಕೊಲ್ಲುತ್ತಾರೆ. ದೊರೆಯ ಆಪ್ತ ಮಂತ್ರಿ ಮಂತ್ರಗುಪ್ತನು ರಾಜಕುಮಾರ ಕಲ್ಯಾಣವರ್ಮನನ್ನು ಬದುಕಿಸಲಿಕ್ಕಾಗಿ ಗುಪ್ತವಾಗಿ ಅಡಗಿಸಿ ಕಾಪಾಡುತ್ತಾನೆ. ಇಲ್ಲಿ ಮಂತ್ರಗುಪ್ತನು ತನ್ನ ದೊರೆಗೆ ನಿಷ್ಠಾವಂತನಾದ ಸೇವಕನಾಗಿ ತನ್ನ ಬುದ್ಧಿ ಚಾಕಚಕ್ಯತೆಯನ್ನು ಪ್ರದರ್ಶಿಸುತ್ತಾನೆ.

**ಶ್ರೀ ಗಣಪತಿ ಭಟ್ ಅರ್ತಿಕಜೆ**

(32ನೇ ಪುಟ ನೋಡಿ)

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳ್ಳ ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಎ. ಶಶಿಕಾಂತ್
1949. ಸಾಲಿಗಲ್ಲಿ
ಚಿಕ್ಕೋಡಿ–591201

ಎಸ್. ಎ. ಶೆಟ್ಟಿಗಾರ್
ನ್ಯೂಸ್ ಏಜಂಟ್
ಸಿದ್ದಕಟ್ಟೆ ಬಂಟ್ವಾಳ ತಾ॥
ದ. ಕನ್ನಡ

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕಬಳ್ಳಾಪುರ

ವೆಂಕಟೇಶ ಶಿವಾಜಿ ಝುಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ಆರ್.ಜಿ ಏಜನ್ಸಿ
ಸೋಮವಾರಪೇಟೆ
ರಾಯಚೂರು

ಪಿ.ಎಸ್. ನಾಗರತ್ನಮ್ಮ
ಸಪ್ತಗಿರಿ ಏಜಂಟ್
837, ಪಿ.ಎನ್.ಕೆ. ರಸ್ತೆ
ಬಂಗಾರಪೇಟೆ

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಜೆ.ಎಸ್. ರಾಮಮೂರ್ತಿ
C/O ಜಿ.ಎಸ್. ಪಾರ್ಥಸಾರಥಿ
ಕಠಾರಿ ಪಾಳ್ಯ, ಕೋಲಾರ

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ

ಎಸ್. ಜಯರಾಂ
731, 9 ಕ್ರಾಸ್ 2 ಮೇನ್
ಎಚ್. ಎ. ಎಲ್. 2 ಸ್ಟೇಜ್
ಬೆಂಗಳೂರು–38

ಬಿ. ಆರ್. ವೆಂಕಟೇಶ ಪ್ರಸಾದ್
929, (ಹೊಸ ನಂ–4) 3 ನೇ ಮುಖ್ಯರಸ್ತೆ
"C" E–B ಬ್ಲಾಕ್, 2 ಸ್ಟೇಜ್,
ರಾಜಾಜಿನಗರ, ಬೆಂಗಳೂರು–10.

ಬಿ. ನಾಗರಾಜ್
1418 ಕೆ. ಟಿ. ರಸ್ತೆ
ಕೋಟೆ, ಚೆನ್ನ ಪಟ್ಟಣ

ಶಂಕರಪ್ಪ
ಫೋಟೋಗ್ರಾಫರ್
6 ಕ್ರಾಸ್, ಕೆ. ಟಿ. ಜಿ ನಗರ
ಉರ್ದುಶಾಲೆಯಬಳಿ
ದಾವಣಗೆರೆ

ಎಸ್. ಶ್ರೀನಿವಾಸ ತಂತ್ರಿ
ಶರಾವತಿ ಹೆಂಚಿನ ಕಾರ್ಖಾನೆ
ಮಾವಿನಕುರ್ವೆ
ಹೊನ್ನಾವರ ತಾಲ್ಲೂಕು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

# ಶಾಕಂಭರೀ ದೇವಿ

**ವಿದ್ವಾನ್ ಬಿ. ಬಾಲಗಣಪತಿ ಭಟ್ಟ**

ಲೋಕ ಶೋಕ ವಿನಾಶಕ್ಕಾಗಿ ಅವತರಿಸಿದ ಜಗದಂಬಿಕೆಯ ರೂಪಗಳು ಹಲವಾರು ಇವುಗಳಲ್ಲಿ "ಶಾಕಂಭರೀ" ಎಂಬುದೂ ಒಂದು. "ಶಾಕೇನ ಬಿಭರ್ತಿ" ಎಂಬ ವಿಶ್ಲೇಷಣೆಯಂತೆ, ಅನ್ನಕ್ಷಾಮಕ್ಕೆ ಒಳಗಾದ ಜಗತ್ತನ್ನು ತಾನು ಸೃಷ್ಟಿಸಿದ ಶಾಕಗಳಿಂದ ಸಂರಕ್ಷಿಸಿದವಳು ಈ ದೇವಿ.

"ಲೋಕರ್ಕಾ ಭರಿಷ್ಯಾಮಿ ತನೂಜ ಶಾಖೈಸ್ತವಾ ಭವಿಷ್ಯಾಮಿ ಶಾಕಂಭರೀತಿ" ಎಂಬುದು ವಾಮನ ಪುರಾಣದ ವಚನ.

ಮಾರ್ಕಂಡೇಯ ಪುರಾಣದಲ್ಲಿ ಈ ದೇವಿಯ ಅವತಾರದ ಪೂರ್ಣ ವಿವರವನ್ನು ಕಾಣಬಹುದು. ಲೋಕ ಕಂಟಕರಾದ ಶುಂಭ–ನಿಶುಂಭರನ್ನು ಸಂಹರಿಸಿದ ದೇವಿಯನ್ನು ಬಹುವಾಗಿ ಸ್ತುತಿಸಿದ ದೇವತೆಗಳಿಗೆ ಈಕೆ ಅಭಯದಾನ ಮಾಡುತ್ತ ತಾನು ಮುಂದೆ ಕೈಗೊಳ್ಳಬಹುದಾದ ಅವತಾರಗಳನ್ನು ವಿವರಿಸುತ್ತ,

"ಭೂಯಶ್ಚ ಶತವಾರ್ಷಿಕ್ಯಾಮನಾ–
ವೃಷ್ಟ್ಯಾಮನಂಭಸಿ ।
ಮುನಿಭಿಃ ಸಂಸ್ಕೃತಾ ಭೂಮೌ
ಸಂಭವಿಷ್ಯಾಮ್ಯಯೋನಿಜಾ ॥
ತತಃ ಶತೇನ ನೇತ್ರಾಣಾಂ
ನಿರೀಕ್ಷಿಷ್ಯಾಮಿಯನ್ಮುನೀನ್ ।
ಕೀರ್ತಯಿಷ್ಯಂತಿ ಮನುಜಾಃ
ಶತಾಕ್ಷೀಮಿತಿ ಮಾಂ ತತಃ ॥
ತತೋಽಹಮಖಿಲಂ ಲೋಕಮಾತ್ಮ
ದೇಹಸಮುದ್ಭವೈಃ
ಭರಿಷ್ಯಾಮಿ ಸುರಾಃ ಶಾಕೈರಾವೃಷ್ಟೇಃ
ಪ್ರಾಣಧಾರಕೈಃ ॥
"ಶಾಕಂಭರೀತಿ" ವಿಖ್ಯಾತಿಂ ತದಾ
ಯಾಸ್ಯಾಮ್ಯಹಂ ಭುವಿ ॥
(ಮಾರ್ಕಂಡೇಯ ಪುರಾಣ)

ಮತ್ತೊಮ್ಮೆ ನೂರುವರ್ಷಗಳ ಅನಾವೃಷ್ಟಿಯನಿಮಿತ್ತ, ಜಲಕ್ಷಾಮವಾಗಿ ಜನಗಳು ಕಂಗೆಡುವರು. ಆಗ ನಾನು ಅಯೋನಿಜೆಯಾಗಿ ಅವತರಿಸಿ ನನ್ನ ನೂರಾರು ಕಣ್ಣುಗಳಿಂದ, ನೋಡುವೆನು. ಅಂದು "ಶತಾಕ್ಷೀ" ಎಂದು ಹೆಸರಾಗುವುದು. ನಂತರ ನನ್ನ ದೇಹದಿಂದ ಉತ್ಪನ್ನವಾದ, ಶಾಕಗಳಿಂದ ಅವರೆಲ್ಲರ ಪ್ರಾಣಧಾರಣೆಗೆ ಅನುವು ಮಾಡಿಕೊಡುವೆನು. ಆದುದರಿಂದ ನಾನು 'ಶಾಕಂಭರೀ' ಎಂಬ ಹೆಸರನ್ನು ಪಡೆಯುವೆನು" ಎಂದು ಹೇಳುವಳು. ಇದೇ ಕಾಲದಲ್ಲಿ "ದುರ್ಗಮ"ಎಂಬ ರಾಕ್ಷಸನನ್ನು ಸಂಹರಿಸಿ "ದುರ್ಗಾ" ಎಂಬ ಹೆಸರನ್ನು ಪಡೆಯುವವಳೇ ಈ ಶಾಕಂಭರೀದೇವಿಯೇ.

ಈ ದೇವಿಯು ಶೂಲ, ಪಾಶ, ಕಪಾಲ, ಚಾಪ, ಶಂಖ ಚಕ್ರ ಇತ್ಯಾದಿ ಆಯುಧಗಳನ್ನು ತನ್ನ ಹದಿನಾರು ಬಾಹುಗಳಲ್ಲಿ ಧರಿಸಿದ್ದಾಳೆ.

ಈ ಮಹಾದೇವಿಯ ಉಪಾಸನೆಯಿಂದ ಕ್ಷಾಮಡಾಮರಾದಿ ಉಪದ್ರವಗಳು ದೂರವಾಗುವುದು ಮಾತ್ರವಲ್ಲದೇ, ಶತ್ರುನಿಗ್ರಹವೂ ಸಾಧ್ಯ ಎಂಬುದಕ್ಕೆ ಐತಿಹಾಸಿಕ ಸಾಕ್ಷ್ಯಾಧಾರಗಳಿವೆ

"ಪೃಥ್ವೀದೇವ" ನೆಂಬ ಹನ್ನೆರಡನೆಯ ಶತಮಾನದಲ್ಲಿದ್ದ ಮಾಂಡಲಿಕ ದೊರೆಯೊಬ್ಬ "ದೇಲ್ಹಣ"ನೆಂಬ ಬ್ರಾಹ್ಮಣ ಶ್ರೇಷ್ಠನಿಂದ, ಶಾಕಂಭರೀದೇವಿಯ ಉಪಾಸನಾ ಪದ್ಧತಿಯನ್ನು ಅರಿತು. ಈಕೆಯ ಅನುಗ್ರಹದಿಂದ ತನ್ನ ಶತ್ರುಗಳನ್ನೆಲ್ಲಾ ಸೆದೆಬಡಿಯಲು ಸಮರ್ಥನಾದನು.

ಅದೇರೀತಿಯಲ್ಲಿ ಅದೇ ವಂಶದ ಮತ್ತೊಬ್ಬ ದೊರೆಗೂ ಶಾಕಂಭರೀದೇವಿಯ ಅನುಗ್ರಹವಾಗಿತ್ತು. ಈತನ ಹೆಸರು "ಗೋಪಾಲ" ಈತ ಈಕೆಯ ಮಂತ್ರವನ್ನು ಕೋಟಿಬಾರಿ ಜಪಿಸಿದ್ದ

ಕೋಟಿಮಂತ್ರ ಪ್ರಭಾವೇಣ
ಪುನರ್ದೇವೀ ವರಂ ದದೌ ।
ಅತುಲಂ ತವ ಗೋಪಾಲ
ಬಲಂ ವೀರ್ಯಂ ಪರಾಕ್ರಮಃ ॥

ಒಟ್ಟಿನಲ್ಲಿ "ಯಂ ಕಾಮಯೇ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಂ ಋಷಿಂ ತಂ ಸುಮೇಧಾಂ" ಎಂಬ ದೇವೀ ಸೂಕ್ತದ ಮಂತ್ರದ ಘೋಷಣೆಯಂತೆ, ಈ ಶಾಕಂಭರೀ, ತನ್ನನ್ನು ಉಪಾಸಿಸಿದ ಭಕ್ತನನ್ನು ಶೂರನನ್ನಾಗಿಯೂ, ಬ್ರಹ್ಮಜ್ಞಾನಿಯನ್ನಾಗಿಯೂ, ಮೇಧಾವಂತನನ್ನಾಗಿಯೂ ಮಾಡುವಳು.

ಶಾಕಂಭರೀ ದೇವಿಯ ಶಕ್ತಿಪೀಠಗಳೆರಡು ಭಾರತದಲ್ಲಿ ಪ್ರಸಿದ್ಧವಾಗಿವೆ. 'ಮೇರಠ್' ಮಂಡಳಕ್ಕೆ ಸೇರಿದ ಸಹಾರನ್‌ಪುರದಿಂದ ಸುಮಾರು ನಲವತ್ತು ಕಿಲೋಮೀಟರ್ ದೂರದಲ್ಲಿ ಇರುವ ಪೀಠವೊಂದು. ಇದರೊಂದಿಗೆ ಪ್ರಸಿದ್ಧವಾಗಿರುವ ಮತ್ತೊಂದು ಪೀಠವು ನವಲಗಢ್ ರೈಲ್ವೇನಿಲ್ದಾಣ (ಜಯಪುರದಿಂದ ಸುಮಾರು ನೂರನಲವತ್ತು ಕಿ. ಮೀ)ದ ಸಮೀಪದ ಪರ್ವತದ ಶಿಖರದಲ್ಲಿದೆ ಈ ಎರಡನೆಯ ಶಾಕಂಭರೀ ದೇವಿಗೆ ಸಂಬಂಧಿಸಿದ, ಕ್ಷೇತ್ರದಲ್ಲಿ ವಿಶೇಷವಾದ ಉತ್ಸವವು ಆಶ್ವಯುಜ ಶುಕ್ಲ ಪೂರ್ಣಿಮಾ ತಿಥಿಯಂದು ನಡೆಯುವುದು.

ಸಹಾರನ್‌ಪುರಕ್ಕೆ ಸಂಬಂಧಿಸಿದ 'ಶಾಕಂಭರೀ' ಶಕ್ತಿಪೀಠಕ್ಕೆ ಸಂಬಂಧಿಸಿದ ಜನಶ್ರುತಿಯ ಕಥೆಯೊಂದು ಇಂತಿದೆ.

ಹುಟ್ಟುಗುರುಡನಾದ ಗೊಲ್ಲನೊಬ್ಬ, ಹಸುಗಳನ್ನು ಮೇಯಿಸುತ್ತ ಕಾಡಿನಲ್ಲಿ ಕುಳಿತಿದ್ದ ಇದ್ದಕ್ಕಿದ್ದಂತೆ ಮಧುರವಾದ ಧ್ವನಿಯೊಂದು ಆತನಿಗೆ ಕೇಳಿಸಿತು. "ಇದು ನನ್ನ ನಿತ್ಯಾವಾಸಪೀಠ, ಇದರ ಅರ್ಚನೆಯನ್ನು ನೀನು ನಿತ್ಯವೂ ಮಾಡುವವನಾಗು."

"ನೀನು ಯಾರು? ಕಣ್ಣಿಲ್ಲದ ನಾನು ನಿನ್ನನ್ನು ಪೂಜಿಸುವುದಾದರೂ ಹೇಗೆ? ನಿನ್ನ ಕೃಪೆಯಿಂದ ನನಗೆ ದೃಷ್ಟಿಬಂದರೆ, ನೀನು ಹೇಳಿದಂತೆ ನಾನು ನಿನ್ನನ್ನು ಪೂಜಿಸ

ಬಹುದು” ಎಂದು ಆ ಕುರುಡನಾದ ಗೊಲ್ಲನು ನುಡಿಯುತ್ತಿದ್ದಂತೆಯೇ ಕಣ್ಣುಗಳು ಬಂದವು. ಅಂದಿನಿಂದ ಈ ಶಕ್ತಿಪೀಠ ಪ್ರಸಿದ್ಧವಾಗಿ, ಇಂದಿಗೂ ದೇವೀಭಕ್ತರ ಆರಾಧ್ಯದೇವತೆಯಾಗಿ 'ಶಾಕಂಭರೀ' ಇಲ್ಲಿ ಮೆರೆಯುತ್ತಿದ್ದಾಳೆ. ಈ ಜನಶ್ರುತಿಗೆ ಆಧಾರವಾಗಿ, ಆ ಗೊಲ್ಲನ ಸಮಾಧಿಯನ್ನು ದೇವೀಮಂದಿರದ ಪಕ್ಕದಲ್ಲಿಯೇ ಇಂದಿಗೂ ಕಾಣಬಹುದು.

'ಪುಷ್ಯ' ಮಾಸದ ಶುಕ್ಲಪಕ್ಷದ ಅಂತ್ಯದಲ್ಲಿ ಈ ಶಾಕಂಭರೀದೇವಿಯ ವ್ರತವನ್ನು ವಿಶೇಷವಾದ ಭಕ್ತಿ ಶ್ರದ್ಧೆಗಳಿಂದ ಆಚರಿಸುವ ಸಂಪ್ರದಾಯ ಇಂದಿಗೂ ಭಾರತದಲ್ಲಿ ನಡೆದುಕೊಂಡುಬಂದಿದೆ.



(29 ನೇ ಪುಟದಿಂದ)

ಇದೇ ಸಮಯದಲ್ಲಿ ಮಧುರೆಯನ್ನಾಳುತ್ತಿದ್ದ ಕೀರ್ತಿಷೇಣನೆಂಬ ದೊರೆಗೆ ಒಬ್ಬಳು ಸುಂದರಿಯೂ, ಜಾಣೆಯೂ ಆದ ಕೀರ್ತಿಮತಿ ಯೆಂಬ ಮಗಳಿದ್ದಳು. ಅವಳು ವಿಂಧ್ಯಾವಾಸಿನಿಯ ಪೂಜೆಗೆಂದು ಹೋಗಿದ್ದಾಗ ವಿಂಧ್ಯಪರ್ವತದ ಗುಪ್ತಸ್ಥಳದಲ್ಲಿ ಕಲ್ಯಾಣವರ್ಮನ ದರ್ಶನವನ್ನು ಪಡೆಯುತ್ತಾಳೆ. ಅಲ್ಲಿ ಅವರ ಪ್ರಣಯ ಮೂಡಿಬರುತ್ತದೆ. ಕೀರ್ತಿಮತಿಯು ಕನಸ್ಸು ಮನಸ್ಸಿನಲ್ಲಿಯೂ ಕಲ್ಯಾಣವರ್ಮನನ್ನು ನೆನೆದು ರಾಜಕುಮಾರನ ಚಿತ್ರವನ್ನು ಸುಂದರವಾಗಿ ಬಿಡಿಸುತ್ತಾಳೆ. ಕೊನೆಗೊಂದು ದಿನ ಸೇನಾಪತಿ ಚಂಡಸೇನನಿಲ್ಲದ ವೇಳೆ ಕಲ್ಯಾಣವರ್ಮನೊಂದಿಗೆ ಮಂತ್ರಗುಪ್ತನು ರಾಜ್ಯವನ್ನು ವಶಪಡಿಸಿ ಕಲ್ಯಾಣವರ್ಮನಿಗೆ ಪಟ್ಟವನ್ನು ಕಟ್ಟುತ್ತಾನೆ. ರಾಜಕುಮಾರನು ಕೀರ್ತಿಮತಿಯನ್ನು ವಿವಾಹವಾಗುತ್ತಾನೆ ಈ ರೀತಿಯಲ್ಲಿ ರಾಜಕೀಯ, ಸಾಮಾಜಿಕ ಸುಂದರ ಚಿತ್ರಣಗಳನ್ನಾಧರಿಸಿ ಕೃತಿಯನ್ನು ರಚಿಸಿದ್ದಾಳೆ. ಅವಳ ರಚನೆಗೆ ಮಾವ ಪುಲಕೇಶಿಯ 'ಪತಿ ಚಂದ್ರಾದಿತ್ಯನ ಪ್ರೋತ್ಸಾಹ ಆಶೀರ್ವಾದ, ಸಲಹೆಗಳು ದೊರಕಿದವು. ಸಂಸಾರದ ಜೀವನದಲ್ಲಿ ಸತಿಪತಿಯರ ಪ್ರೇಮ, ಧಾರ್ಮಿಕ ನಂಬಿಕೆಗಳು ವ್ಯಕ್ತವಾಗುವಂತೆ ಇತರರಿಗೆ ಮಾರ್ಗದರ್ಶನವಾಗುವಂತೆ ನಾಟಕವನ್ನು ರಚಿಸಿದಳು. ರಾಜಕೀಯ ಜೀವನದ ವಿರೀತಗಳು, ಸಾಹಿತ್ಯಕಲೆ ಪ್ರೇಮಗಳು ಕವಯಿತ್ರಿಗೆ ಸ್ಫೂರ್ತಿಯನ್ನು ಕೊಟ್ಟವೆ. ಕರ್ನಾಟಕದ ಶ್ರೇಷ್ಠ ಅರಸು ಮನೆತನಗಳು ಕಲೆ, ಸಾಹಿತ್ಯ, ಶಿಲ್ಪಕಲೆಗೆ ಬಹಳ ಹಿಂದೆಯೇ ಹೆಸರಾಗಿದ್ದುವು ಇಂತಹ ಶ್ರೇಷ್ಠ ಅರಸು ಮನೆತನಕ್ಕೆ ಸೇರಿದ ವಿಜಯಾಂಕೆ ಶ್ರೇಷ್ಠ ಕವಯಿತ್ರಿ ಎಂದರೆ ಆಶ್ಚರ್ಯವೇನೂ ಇಲ್ಲ.



# ಕೆಲವು ನ್ಯಾಯಗಳು

ಶ್ರೀಮಂತವೂ ರಮ್ಯಗಂಭೀರವೂ ಆಗಿರುವ ಸಂಸ್ಕೃತ ಸಾಹಿತ್ಯದಲ್ಲಿನ ಅಮೂಲ್ಯ ಸಂಗತಿಗಳು, ಚಿನ್ತನಶೀಲ ಸಾಹಿತ್ಯಾರಾಧಕರಿಗೆ ಅಕ್ಷಯ ಭಂಡಾರ. ಅದ್ವೈತ ವೇದಾಂತಿಗಳು ತಮ್ಮ ಅಭಿಪ್ರಾಯವನ್ನು ಪುಷ್ಟೀಕರಿಸುವುದಕ್ಕಾಗಿ ರಜ್ಜುಸರ್ಪನ್ಯಾಯ ರಜತಶುಕ್ತಿನ್ಯಾಯ...ಮುಂತಾದ ಮಾತುಗಳನ್ನು ಬಳಸುತ್ತಾರೆ ಕಾಕತಾಳೀಯನ್ಯಾಯ – ಕೂಪಮಂಡೂಕನ್ಯಾಯ... ಇತ್ಯಾದಿ ಮಾತುಗಳು ಸಾಮಾನ್ಯವಾಗಿ ಬಳಕೆಯಲ್ಲಿವೆ.

ರಾಜಸ್ಥಾನ ಪ್ರಾಂತ್ಯದಲ್ಲಿದ್ದನೆಂದು ಹೇಳಲಾಗುವ ರಘುನಾಥನೆಂಬಾತ – "ಲೌಕಿಕನ್ಯಾಯಸಂಗ್ರಹ"–ಎಂಬ ಮಹತ್ವಪೂರ್ಣ ಗ್ರಂಥ ಬರೆದಿದ್ದಾನೆ. "ಲೌಕಿಕ ನ್ಯಾಯಾಂಜಲಿ" ಎಂಬ ಗ್ರಂಥದ ಮೂಲ ಲೇಖಕನ ಹೆಸರು ಖಚಿತವಾಗಿ ತಿಳಿದಿಲ್ಲ. ಆದರೆ ಆ ಗ್ರಂಥವನ್ನು ಕರ್ನಲ್ ಜಿ. ಎ. ಜೇಕಬ್ ಎಂಬಾತ ಪ್ರಕಟಿಸಿದ್ದಾನೆ. ಅದರಲ್ಲಿ 430 ನ್ಯಾಯಗಳ ಉಲ್ಲೇಖವಿದೆ. ಇತ್ತೀಚೆಗೆ ಶ್ರೀಮಾನ್ ರಂಗನಾಥಶರ್ಮ ಎಂಬುವರು 212 ನ್ಯಾಯಗಳ ನಿರೂಪಣೆ ಕೊಟ್ಟು ಒಂದು ಗ್ರಂಥ ಪ್ರಕಟಿಸಿದ್ದಾರೆ. ಜ್ಯೂರಿಸ್ ಪ್ರೂಡೆನ್ಸ್– ಎಂಬ ನ್ಯಾಯಶಾಸ್ತ್ರದಲ್ಲಿ, ನೂರಾರು ಗ್ರೀಕ್ ಸಾಹಿತ್ಯದ ನ್ಯಾಯಗಳ ಉಲ್ಲೇಖವಿದೆ. ಇದೇರೀತಿ ಪ್ರಾಚೀನ ಭಾರತೀಯ ನ್ಯಾಯಶಾಸ್ತ್ರ ಗ್ರಂಥಗಳಲ್ಲಿ ಅನೇಕ ನ್ಯಾಯಗಳ ಉಲ್ಲೇಖ ಬರುತ್ತದೆ.

ಗಾಥೆಗಳು ಬೇರೆ– ನ್ಯಾಯಗಳು ಬೇರೆ. ಆದರೆ ನ್ಯಾಯಗಳನ್ನು ಗಾದೆಗಳಂತೆ ವ್ಯವಹಾರದಲ್ಲಿ ಬಳಸಿದರೆ ತಪ್ಪಿಲ್ಲ. ಪ್ರಾಚೀನ ಮೀಮಾಂಸಕರ ಅಭಿಪ್ರಾಯದಂತೆ ನ್ಯಾಯಗಳು ಎರಡು ಗುಂಪಾಗಿವೆ ಒಂದು ಗುಂಪಿನಲ್ಲಿ ವ್ಯಾಪಕ ಅರ್ಥವನ್ನೊಳಗೊಂಡ, ವಿವರಣೆ ಅತ್ಯಗತ್ಯವಾಗಿರುವ ನ್ಯಾಯಗಳಿವೆ. ಇನ್ನೊಂದು ಗುಂಪಿನಲ್ಲಿ ಅನುಭವ ಜನ್ಯ ನ್ಯಾಯಗಳಿವೆ. ನ್ಯಾಯವೆಂಬುದು ವ್ಯಾಪಕ ಅರ್ಥವನ್ನು–ಅಡಕವಾಗಿ – ಸಂಗ್ರಹವಾಗಿ ಹೇಳುವ ಒಂದು ಸೂತ್ರವಾಕ್ಯ.

ಜೀವನದಲ್ಲಿ ಈ ನ್ಯಾಯಗಳಿಗೊಂದು ಔಚಿತ್ಯಪೂರ್ಣಸ್ಥಾನವಿದೆ. ಉದಾಹರಣೆಗಾಗಿ ಕೆಲವನ್ನು ಪ್ರಸ್ತಾಪ ಮಾಡೋಣ.

ಪಾಠಕ್ರಮನ್ಯಾಯ :

ಯಾವುದೇ ಕಾನೂನನ್ನು ಜಾರಿಗೊಳಿಸುವಾಗ, ಯಾವುದೇ ಖಚಿತ ತೀರ್ಮಾನವನ್ನು ಕೈಗೊಳ್ಳುವಾಗ, ಸಂಬಂಧಪಟ್ಟ ವ್ಯಕ್ತಿ ಅಥವ ಸಂಘಸಂಸ್ಥೆ ಅಥವ ಸರಕಾರ, ಹಂತ ಹಂತವಾಗಿ ಕೆಲವು ಅಗತ್ಯಕ್ರಮಗಳನ್ನನುಸರಿಸಲೇಬೇಕಾಗುತ್ತದೆ ಕಡ್ಡಾಯವಾಗಿ. ಉದಾ: ಸರಕಾರ ಯಾವುದೋ ಒಂದು ನಿರ್ದಿಷ್ಟ ಭೂಮಿಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಬೇಕಾದ ಸಂದರ್ಭ ಬಂದಾಗ, ಆ ವಿಚಾರವನ್ನು ಸಾರ್ವಜನಿಕರಿಗೆ ತಿಳಿಸಿ. ಅದಕ್ಕೆ ಯಾರಿಂದಲಾದರೂ–ಅಡ್ಡಿ ಆತಂಕವಾಗಲೀ, ಆಕ್ಷೇಪಣೆಯಾಗಲೀ ಬರುವುದುಂಟೇ– ಎಂಬುದನ್ನು ಗಮನಿಸಬೇಕು. ಇಂತಹ ಆಕ್ಷೇಪಗಳನ್ನು ಸೂಚಿಸಲು ಒಂದು ನಿರ್ದಿಷ್ಟ ಕಾಲಾವಧಿ ನೀಡಬೇಕು. ಈ ಕಾಲಾವಧಿಯ ನಂತರ ಬರುವ ಆಕ್ಷೇಪಗಳಿಗೆ ಗಮನ ಕೊಡಬೇಕಾಗುವುದಿಲ್ಲ. ಆ ಒಳಗಾಗಿ ಬಂದ ಆಕ್ಷೇಪಗಳಿಗೆ ಸೂಕ್ತ ಸಮಜಾಯಿಷಿ ಕೊಟ್ಟು, ಕೆಲವುವೇಳೆ ಪ್ರತ್ಯಾಮ್ನಾಯ ಪರಿಹಾರಕೊಟ್ಟು ಸರಿಪಡಿಸಬೇಕಾಗುತ್ತದೆ. ಈ ಕ್ರಮಗಳೆಲ್ಲ ಹಂತ ಹಂತವಾಗಿ ಮುಗಿದ ನಂತರವೇ ಒಂದು ಅಂತಿಮ ನಿರ್ಣಯಕ್ಕೆ ಬರಬೇಕಾಗುತ್ತದೆ. ಕ್ರಮಗಳನ್ನನುಸರಿಸಿ ನಿರ್ಣಯ ಮಾಡಬೇಕೇ ವಿನಹ, ಮೊದಲೇ ನಿರ್ಣಯ ಮಾಡಿಕೊಂಡು ನಂತರ ಕ್ರಮದ [illegible] ಎತ್ತಬಾರದು. ಹಾಗೆ ಮಾಡಿದರೆ ಅದು ಅಕ್ರಮವಾಗುತ್ತದೆ. ಇಂಗ್ಲಿಷ್‌ನಲ್ಲಿ follow the procedure – ಎಂಬ ಮಾತಿದೆ ಇದನ್ನೇ ನಮ್ಮ ಹಿರಿಯರು ಪಾಠಕ್ರಮನ್ಯಾಯವೆಂದರು.

**ವಿದ್ವಾನ್ ಬ. ನ. ಗುಂಡೂರಾವ್**

ದರ್ಶಪೂರ್ಣಮಾಸನ್ಯಾಯ :–

ಅನೇಕ ಜನ ಕೆಲಸ ಮಾಡಿದರೂ ಅದು ಒಂದೇ ಕಾರ್ಯವೆಂದು ಪರಿಗಣಿಸಬೇಕಾದ ಸಂದರ್ಭಗಳಿರುತ್ತವೆ.

ಪ್ರಯೋಜನಾಭಿ ಸಂಬಂಧಾತ್, ಪೃಥಕ್ ಸತಾಂ ತತಃ ಸ್ಯಾತ್, ಏಕಕರ್ಮ್ಯಮೇಕ ಶಬ್ದಾಭಿ ಸಂಯೋಗಾತ್– ಎಂದು ನ್ಯಾಯ ದರ್ಶನಕಾರ ಜೈಮಿನಿ, ಇದಕ್ಕೆ ವಿವರಣೆ ಕೊಟ್ಟಿದ್ದಾನೆ. ದರ್ಶಪೂರ್ಣಮಾಸವೆಂಬುದೊಂದು ಯಜ್ಞ. ಅದರಲ್ಲಿ ಅನೇಕ ಋತ್ವಿಜರು ಅನೇಕ ಬಗೆಯ ಕೆಲಸಗಳನ್ನು ನಿರ್ವಹಿಸುತ್ತಾರೆ. ಹೋತಾರನ ಕೆಲಸ ಬೇರೆ. ಬ್ರಹ್ಮನ ಕೆಲಸ ಬೇರೆ. ಆದರೆ ಎಲ್ಲರೂ ಸೇರಿ ಯಜ್ಞ ಮಾಡಿದರು– ಎಂಬುದೊಂದೇ ಪರಿಗಣನೀಯ ವಿಚಾರ ಗಾರೆಯವನ ಕೆಲಸಬೇರೆ, ಬಡಗಿಯ ಕೆಲಸಬೇರೆ, ಮಣ್ಣಿನ ಕೆಲಸ ಬೇರೆ; ಸಿಮೆಂಟು ಕಲೆಸುವವನ ಕೆಲಸ ಬೇರೆ ಆದರೂ ಮನೆ ಕಟ್ಟಿದರು ಎಂಬುದೇ ಇಲ್ಲಿ ಮುಖ್ಯ ಅಭಿಪ್ರಾಯ

ಕಲಂಜನ್ಯಾಯ :–

ಯಾವುದೇ ವಿಚಾರವನ್ನು ಕಾನೂನು ಬದ್ಧವಾಗಿ ನಿಷೇಧಗೊಳಿಸಿದಾಗ ಈ ಮಾತು ಬಳಸುವರು, ಕಾನೂನು ಪ್ರಕಾರ ನಿಷೇಧಿಸಲ್ಪಟ್ಟದ್ದು ಎಂಬ ಅರ್ಥದಲ್ಲಿದೆ ಈ ನ್ಯಾಯ. ಮಾತು ನಿಷೇಧಾತ್ಮಕವಾಗಿರುವಾಗ ಅದು ಸೂಚನೆಯಲ್ಲ–ಆಜ್ಞೆ–ಎಂದೇ ಅರ್ಥ.

ಮಂಡೂಕಪ್ಲುತಿ ನ್ಯಾಯ :–

ನಿಬಂಧನೆಗಳು, ಉಪನಿಬಂಧನೆಗಳು ಹೇರಳವಾಗಿರುವಾಗ. ಕಾನೂನನ್ನು ಸಮಗ್ರವಾಗಿ ಸಾರ್ಥಕಗೊಳಿಸಲು, ಅದರ ವ್ಯಾಪ್ತಿಯನ್ನು ಗಮನದಲ್ಲಿರಿಸಿಕೊಂಡು, ಯಾವುದೋ ಕೆಲವು ನಿಬಂಧನಾ ವಾಕ್ಯಗಳನ್ನು ಕೈಬಿಡಲಾಗುತ್ತದೆ. ಅಂತಹ ಸಂದರ್ಭದಲ್ಲಿ ಈ ಮಾತು ಬಳಸಲಾಗುತ್ತದೆ.

ಗೋ ಬಲೀವರ್ದ ನ್ಯಾಯ :

ಮನುಸ್ಮೃತಿಯಲ್ಲಿ ಒಂದು ಶ್ಲೋಕವಿದೆ —

ವಶಾ ಪುತ್ರಾಸು ಚೈವಂ ಸ್ಯಾತ್
ರಕ್ಷಣಂ ನಿಷ್ಕುಲಾಸು ಚ
ಪತಿವ್ರತಾಸು ಚ ಸ್ತ್ರೀಷು
ವಿಧವಾಸ್ವಾತುರಾಸು ಚ ||

ಈ ಶ್ಲೋಕ ಅರ್ಥವಿವರಣೆ ನೀಡುತ್ತ ಪ್ರಸಿದ್ಧ ವಿದ್ವಾಂಸನಾದ ಕಲ್ಲೂಕಭಟ್ಟ ಈ ನ್ಯಾಯವನ್ನು ಉಲ್ಲೇಖಿಸಿದ್ದಾನೆ. ಇದು ಗ್ರೀಕ್ ನ್ಯಾಯವಾದ Ejusdem generis ಎಂಬುದಕ್ಕೆ ಹೋಲುವಂತಿದೆ.

ಸಜಾತೀಯವೂ ಸಮಾನಾರ್ಥಕವೂ ಆದ ಎರಡು ಪದಗಳನ್ನು ಬಳಸಿದಾಗ, ಅವರಲ್ಲೊಂದು ಸಾಧಾರಣವೂ ಇನ್ನೊಂದು ನಿರ್ದಿಷ್ಟವೂ ಆಗಿದ್ದರೆ, ಉತ್ತರಪದವು ಪೂರ್ವಪದದ ವ್ಯಾಪ್ತಿಯನ್ನು ಪರಿಮಿತಗೊಳಿಸುತ್ತದೆ.

ಇದಕ್ಕೆ ವಿರುದ್ಧವಾದ ಒಂದು ನ್ಯಾಯವಿದೆ. ಅದನ್ನು ಘಟಪಟನ್ಯಾಯವೆಂದು ಕರೆಯುತ್ತಾರೆ.

ಕಾಕದಂತ ಪರೀಕ್ಷಾನ್ಯಾಯ :–

ಅರ್ಥಹೀನ, ನಿರುಪಯೋಗಿ, ವ್ಯರ್ಥ ವಿಚಾರಣೆ ಎಂಬುದನ್ನು ಈ ನ್ಯಾಯ ಸೂಚಿಸುತ್ತದೆ. ಕಾಗೆಗೆ ಹಲ್ಲಿಲ್ಲ–ನಿಜ. ಅದನ್ನು ಪರೀಕ್ಷಿಸಲೆತ್ನಿಸುವುದು ವ್ಯರ್ಥ.

ಸುಂದೋಪಸುಂದ ನ್ಯಾಯ :–

ಪರಸ್ಪರ ವಿರೋಧ ಹಾಗೂ, ಧ್ವಂಸಾತ್ಮಕ ದೋಷಾರೋಪಣೆಗಳು ಎಂಬ ಅರ್ಥದಲ್ಲಿ ಈ ಮಾತು ಬಳಸಲಾಗುತ್ತದೆ ಒಂದು ಹೆಣ್ಣಿಗಾಗಿ ಪರಸ್ಪರ ಹೋರಾಟ ಮಾಡಿದ ಅಣ್ಣತಮ್ಮಂದಿರಿವರು – ಎಂದು ಕಥೆ ಇದೆ.

ಅರ್ಕಮಧುನ್ಯಾಯ :–

ಅರ್ಕೇ ಚೇನ್ಮಧುವಿನ್ದೇತ ಕಿಮರ್ಥಂ ಪರ್ವತಂ ವ್ರಜೇತ್? ಎಂಬ ಗಾದೆಯ ಮಾತಿದೆ. ಮನೆಯ ಹಿಂದಿರುವ ಎಕ್ಕದ ಗಿಡದಲ್ಲೇ ಜೇನು ಸಿಕ್ಕುವಾಗ, ದೂರದ ಬೆಟ್ಟಕ್ಕೆ ಜೇನಿಗಾಗಿ ಹುಡುಕಿಕೊಂಡು ಹೋಗಬೇಕಾದ ಕೆಲಸವೇನಿದೆ? ಎಂದು ಇದರ ಅರ್ಥ. ಸುಲಭವಾಗಿ ಇತ್ಯರ್ಥ ಮಾಡಬಹುದಾದ ವಿಚಾರಕ್ಕೆ, ಸುತ್ತಿ ಬಳಸಿ ನೂರೆಂಟು ರೀತಿಯಲ್ಲಿ ವ್ಯರ್ಥವಾದ ವಿವಾದ ಮಾಡುವುದು ಸೂಕ್ತವಲ್ಲವೆಂಬ ಅರ್ಥದಲ್ಲಿ ಈ ಮಾತು ಬಳಸುತ್ತಾರೆ

ಪಂಕಪ್ರಕ್ಷಾಳನ ನ್ಯಾಯ :–

ಕೆಸರು ತುಳಿಯುವುದೇಕೆ? ನಂತರ ಕಾಲು ತೊಳೆದುಕೊಳ್ಳುವುದೇಕೆ? ಅನಾವಶ್ಯಕವಾದ ವ್ಯವಹಾರಕ್ಕೆ ಕೈ ಹಾಕುವುದು, ನಂತರ ಬಿಡಿಸಿಕೊಳ್ಳಲು ಪ್ರಯತ್ನ ಪಡುವುದು ಸೂಕ್ತವಲ್ಲ ಎಂಬ ಅರ್ಥದಲ್ಲಿ ಈ ಮಾತು ಬಳಸಲಾಗುತ್ತದೆ ಮನುಷ್ಯ ತನ್ನ ಅವಿವೇಕ ಅಥವ ಅಚಾತುರ್ಯದಿಂದ ಕೆಲವು ವೇಳೆ ಇಕ್ಕಟ್ಟಿಗೆ ಸಿಕ್ಕುತ್ತಾನೆ. ನಂತರ ಬಿಡಿಸಿಕೊಳ್ಳಲು ಒದ್ದಾಡಬೇಕಾಗುತ್ತದೆ ಆಗ ಈ ಮಾತು ನೆನಪಾದೀತಲ್ಲವೇ ?

ಅಜಾತಪುತ್ರ ನಾಮೋತ್ಕೀರ್ತನ ನ್ಯಾಯ:-

ಹುಟ್ಟದ ಕೂಸಿಗೆ ಕುಲಾವಿ ಹೊಲಿಸಿದರು– ಎಂಬಂತಿದೆ ಈ ಮಾತು. ಯಾವ ವ್ಯವಹಾರ ನ್ಯಾಯಾಲಯದ ಮುಂದೆ ಬಂದಿಲ್ಲ, ಅದನ್ನು ವಿಚಾರಣೆಗೆ ತೆಗೆದುಕೊಂಡು ವಜಾ ಮಾಡಬೇಕೆಂದು ಅರ್ಜಿ ಹಾಕಿದವನ ಅವಿವೇಕ ಕಂಡು ಈ ಮಾತಾಡಿರಬೇಕು.

ಪ್ರಧಾನಮಲ್ಲ ನಿರ್ವಹಣ ನ್ಯಾಯ :–

ಯಾವುದೇ ವ್ಯವಹಾರದಲ್ಲಾಗಲಿ ನಮಗೆ ಅನಾನುಕೂಲ ಹಾಗೂ ಅಪಾಯಕರವಾದ ಅಂಶವನ್ನು ಮೊದಲು ಪರಿಹಾರ ಮಾಡಿ ಕೊಂಡು ಸರಿಪಡಿಸಿಕೊಂಡರೆ. ಉಳಿದ ಅಂಶಗಳನ್ನು ಬಹು ಸುಲಭವಾಗಿ ಒಗೆಹರಿಸಿ ಕೊಳ್ಳಬಹುದು–ಎಂದು ಇದರ ಅರ್ಥ.

ನಾಶಕುಶಾವಲಂಬನ ನ್ಯಾಯ :–

ಮುಳುಗುವಾತ ಹುಲ್ಲು ಕಡ್ಡಿಯನ್ನಾ ದನ್ನಾದರೂ ಹಿಡಿದುಕೊಳ್ಳುತ್ತಾನೆ. ಕೆಲವು ಜನ ಖಟ್ಲೆಗೆ ಸಂಬಂಧಪಟ್ಟ ಎಲ್ಲ ಪ್ರಧಾನ ಅಂಶಗಳಲ್ಲೂ ಸೋತಿದ್ದರೂ ಸಹ, ಯಾವುದೋ ಕ್ಷುಲ್ಲಕ. ಸತ್ವಹೀನ ಅಂಶವನ್ನೇ ಹಿಡಿದುಕೊಂಡು ವಾದಮಾಡಿ ಗೆಲ್ಲಬೇಕೆಂದು ಬಯಸುತ್ತಾರೆ. ಅಂತಹ ಸಂದರ್ಭದಲ್ಲಿ ಈ ಮಾತಾಡಬಹುದಲ್ಲದೇ!!.

ಘಟ್ಟಕುಟೀ ಪ್ರಭಾತನ್ಯಾಯ :–

ಮಾನವ ಯಾವುದರ ಹಿಡಿತದಿಂದ ತಪ್ಪಿಸಿ ಕೊಳ್ಳಬೇಕೆಂದು ವಿಶೇಷ ಪ್ರಯತ್ನ ಮಾಡುತ್ತಾನೆ, ಅದಕ್ಕೇ ಸಿಕ್ಕಿಕೊಂಡು ಹಿಂಸೆ ಪಡುತ್ತಾನೆ. ನ್ಯಾಯಾಲಯದಲ್ಲಿ ಪಾಟಿಸವಾಲಿನ ಸಂದರ್ಭದಲ್ಲಿ ಹೀಗಾಗುವುದುಂಟು. ಸುಂಕ ಕೊಡದೆ ತಪ್ಪಿಸಿಕೊಳ್ಳಲು ಇಡೀ ರಾತ್ರಿ ಓಡಾಡಿ, ಸರಕು ತುಂಬಿದ ಗಾಡಿಯನ್ನು ಒಂದುಕಡೆ ನಿಲ್ಲಿಸಿದರಂತೆ– ಅದು ಸುರಕ್ಷಿತಸ್ಥಳವೆಂದು ಭಾವಿಸಿ. ಬೆಳಗ್ಗೆ ನೋಡಿದರೆ–ಅದೇ ಸುಂಕದ ಕಚೇರಿ!!

ಜಲಾನಯನ ನ್ಯಾಯ :–

ನೀರು ತೆಗೆದುಕೊಂಡು ಬಾರೆಂದಾಗ– ಪಾತ್ರೆಯಲ್ಲಿ–ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಒಬ್ಬ ಅಧಿಕಾರಿಗೆ ಕೆಲವು ಅಧಿಕಾರಗಳಿವೆ ಎಂದಾಗ–ಅದನ್ನು ಜಾರಿಗೊಳಿಸುವ ಅಧಿಕಾರವೂ ಇವೆ ಎಂದು ಬೇರೆ ಹೇಳಬೇಕಾಗಿಲ್ಲ–ಇದು ಇಲ್ಲಿ ಅಭಿಪ್ರಾಯ.

ಶ್ವಶ್ರೂನಿರ್ಗಚ್ಛೋಕ್ತಿ ನ್ಯಾಯ :–

ಇವರಲ್ಲಿ ತುಂಬ ವಿನೋದವಿದೆ. ಒಂದು ಭೂಮಿಗೆ ಸಂಬಂಧಪಟ್ಟ ವ್ಯವಹಾರವಿದೆ ಎಂದು ಭಾವಿಸಿ. ಅದು ಇಡೀಗ್ರಾಮದ ಗೋಮಾಳ. ಒಬ್ಬನು ಅದನ್ನು ಆಕ್ರಮಿಸಿ ಕೊಳ್ಳುವುದು ಅಪರಾಧವೆಂದು ನ್ಯಾಯಾಲಯ ತೀರ್ಪು ಕೊಡಬಹುದು, ಆದರೆ ಹಸ್ತಾಂತರ ವ್ಯವಹಾರ ನಡೆದ ನಂತರ ನ್ಯಾಯಾಲಯ ಹೇಳುತ್ತದೆ – ಈ ಜಮೀನು ಗೋಮಾಳವೆಂದು ರೆವಿನ್ಯೂ ಅಧಿಕಾರಿ–ತಹಸೀಲ್ದಾರ–ಹೇಳಬೇಕು ಶಂಖದಲ್ಲಿ ಬಿದ್ದರೇನೇ ತೀರ್ಥ!!

ಬಾಗಿಲಲ್ಲಿ ಕೂಗುತ್ತಿದ್ದ ಭಿಕ್ಷುಕನಿಗೆ ಮುಂದೆ ಹೋಗು ಎಂದು ಸೊಸೆ ಹೇಳಿದಳಂತೆ. ಅವನು ಹೊರಟು ಹೋದ. ಇದನ್ನು ಗಮನಿಸಿದ ಅತ್ತೆಗೆ ಅಸಮಾಧಾನವಾಯಿತು. ಹೋಗುತ್ತಿದ್ದ ಭಿಕ್ಷುಕನನ್ನು ಕೂಗಿ ಕರೆದಳು. ಕರೆದು ಭಿಕ್ಷೆ ಹಾಕಿದಳೇ? ಇಲ್ಲ. ಅಯ್ಯಾ– ಮುಂದೆ ಹೋಗು ಎಂದು ಹೇಳಿದ್ದು ಸೊಸೆ. ಅವಳಿಗೆ ಹಾಗೆ ಹೇಳುವ ಅಧಿಕಾರವಿಲ್ಲ ಆ ಅಧಿಕಾರವಿರುವುದು–ಅತ್ತೆಯಾದ ನನಗೆ, ಈಗ ಹೇಳುತ್ತೇನೆ ಮುಂದೆ ಹೋಗು–ಎಂದು ಗದರಿಸಿ ಕಳಿಸಿದಳಂತೆ. ಇದು ಈ ನ್ಯಾಯದ ಅಭಿಪ್ರಾಯ.

ಪ್ರಾಚೀನ ಗ್ರಂಥಗಳಲ್ಲಿ ಇಂತಹ ನ್ಯಾಯಗಳು ನೂರಾರು ಸಿಕ್ಕುತ್ತವೆ ಈ ಸೂತ್ರ ವಾಕ್ಯಗಳನ್ನು ಕೊಟ್ಟುಹೋದ ಪ್ರಾಚೀನ ವಿದ್ವಾಂಸರ ಪಾಂಡಿತ್ಯ ಅಪಾರ. ಅನುಭವ ಅಗಾಧ. ಹಾಸ್ಯ ಪ್ರಜ್ಞೆಯೂ ಕಡಿಮೆಯೇನಲ್ಲ.

ಜೀವನವೆಷ್ಟು ವೈವಿಧ್ಯಮಯ – ನ್ಯಾಯಗಳು ಅಷ್ಟೇ ವೈವಿಧ್ಯಮಯವಾಗಿರುತ್ತವೆ.





# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

(7 ನೇ ಪುಟದಿಂದ)

ಮೊಳಿಯೈಕ್ಕಡಕ್ಕುಮ್ ಪೆರುಮ್ ಪುಗಳಾನ್
ವಂಜಮುಕ್ಕುರುಮ್ಬಾಮ್
ಕುಳಿಯೈಕ್ಕಡಕ್ಕುಮ್ ನಮ್‌ಕ್ಕೂರತ್ತಾಳ್ವಾನ್
ಶರಣ್‌ಕೂಡಿಯಪಿನ್
ಪಳಿಯೈಕ್ಕಡತ್ತು ಇರಾಮಾನುಜನ್ ಪುಗಳ್
ಪಾಡಿಯಲ್ಲಾ
ವಳಿಯೈಕಡತ್ತಲ್, ಎನಕ್ಕಿನಿಯಾದುಮ್
ವರುತ್ತಮನ್ರೇ ॥ 7 ॥

ವಾಕ್ಕಿನಿಂದ ವರ್ಣಿಸಲು ಅಸಾಧ್ಯವಾದ ಹಿರಿಯ ಕೀರ್ತಿಯುಕ್ತರಾದವರು ಕೂರೇಶರು (ಮೊಳಿಯೈ ಕಡಕ್ಕುಮ್ ಪೆರುಮ್ ಪುಗಳ್), ಕುಲಮದ, ವಿದ್ಯಾಮದ ಮತ್ತು ಧನಮದಗಳೆಂಬ ವಂಚನೆಯಿಂದ ಕೂಡಿದ ಅಹಂಕಾರ (ಮುಕ್ಕುರುಂಬು) ತ್ರಯವೆಂಬ ಹಳ್ಳಕ್ಕೇ ಬೀಳದಂತೆ (ಕುಳಿಯೈ) ಜೀವಾತ್ಮರನ್ನು ತಮ್ಮ ತತ್ತ್ವಹಿತಪುರುಷಾರ್ಥ ಯಥಾತ್ಮ್ಯಜ್ಞಾನದಿಂದ ರಕ್ಷಿಸುವವರಾಗಿದ್ದರು. ಕೂರೇಶರು ಚೇತನರ ಉಜ್ಜೀವನಕ್ಕಾಗಿಯೇ 'ಕೂರಂ' ಎಂಬ ದಿವ್ಯಕ್ಷೇತ್ರದಲ್ಲಿ ಅವತರಿಸಿದ ಶ್ರೀವತ್ಸಾಂಕರು ಶ್ರೀವತ್ಸ–ಅಂದರೆ ವಿಷ್ಣು. ಅವರು ವೈಷ್ಣವತ್ವದಲ್ಲಿ ಅತ್ಯಂತ ಹಿರಿಮೆಯುಳ್ಳವರಾದುದರಿಂದ. ಅಂಕ (ಅಂಗ)ರಾಗಿ ಶ್ರೀವತ್ಸಾಂಕರಾದರು. ಅವರ ಪಾದಾಶ್ರಯದನಂತರ (ಶರಣ್ ಕೂಡಿಯಪಿನ್) ಅಮುದನಾರ್‌ರವರಿಗೆ ಅಪವಾದಗಳಿಂದ ಕೂಡಿದ ಪಾಪಗಳನ್ನು ದೂರವಾಗಿಸುವಂತಹ, ರಾಮಾನುಜರ ಕೀರ್ತಿಯನ್ನು ಹಾಡಿ (ಪುಗಳ್ ಪಾಡಿ) ಪ್ರಲೋಭ ಮತ್ತು ಪಾಪಮೋಹಗಳನ್ನು ಹೋಗಲಾಡಿಕೊಂಡು (ಪಯಿಯೈ ಕಡತ್ತಲ್) ಮುಂದೆ ಯಾವವಿಷಯವೂ ಅಸಾಧ್ಯವಲ್ಲವೆನ್ನುವಂತಾಗಿ, ಎಲ್ಲವೂ ಸುಲಭಸಾಧ್ಯವಾಯಿತು; ಎಂದು ಹೇಳುತ್ತಾರೆ.

ಶಿಷ್ಯರಲ್ಲಿ ಶ್ರೇಷ್ಠರಾಗಿ ಭಾಗವತರ ಗುಂಪಿಗೆ ಸೇರಿ, ಆಚಾರ್ಯಕೈಂಕರ್ಯದಲ್ಲಿ ಆ ಭಗವಂತನ ಕೈಂಕರ್ಯವೂ ಸೇರಿದೆ ಎಂದು ಚೇತನವರ್ಗಕ್ಕೆ ತಿಳಿಯಪಡಿಸಿದ ಮಹಾತ್ಮರು ಕೂರೇಶರು. ಅವರ ಸಂಬಂಧದಿಂದ ಅವರಲ್ಲಿಗೆ ಬಂದವರಿಗೂ ಈ ಪ್ರಧಾನಗುಣದ ಅನುಸರಣೆ ಯಾವಕ್ಲೇಶವೂ ಇಲ್ಲದೆ ಮುಂದುವರೆಯಲು ಸಾಧ್ಯವಾಯಿತೆಂದು ಅಮುದನಾರ್ ತಿಳಿಸುತ್ತಾರೆ.

ಮೇಲಿನ ಏಳು ಪದ್ಯಗಳಲ್ಲಿ ಶ್ರೀ ವೈಷ್ಣವರಿಗೆ ಅತ್ಯವಶ್ಯಕವಾಗಿ ಇರಬೇಕಾದ ಪರಭಕ್ತಿ, ಪರಜ್ಞಾನ ಮತ್ತು ಪರಮಭಕ್ತಿಯನ್ನು ತಿಳಿಸಿರುತ್ತಾರೆ ಮೊದಲ ನಾಲ್ಕು ಪಾಶುರಗಳಲ್ಲಿ ಆಚಾರ್ಯರ, ಭಗವದ್ ಭಾಗವತರ ಸಂಬಂಧ ಜ್ಞಾನವೇ ಪ್ರಥಮವಾಗಿ ಚೇತನನಲ್ಲಿರಬೇಕಾದ ಗುಣವೆಂದೂ, ಐದು ಮತ್ತು ಆರನೇ ಪಾಶುರಗಳಲ್ಲಿ ಅಪೃಥಕ್ ಸಿದ್ಧಿಗೆ ಒಳಪಡುವ ವೈದಿಕರ ಜ್ಞಾನದ ಹಿರಿತನವನ್ನೂ, ಕಡೆಯದಾಗಿ ಏಳನೇ ಪದ್ಯದಲ್ಲಿ ಶಿಷ್ಯರಲ್ಲಿ ಅವಶ್ಯಕವಾಗಿ ಇರಬೇಕಾದ ಆಚಾರ್ಯ ನಿಷ್ಠೆಯನ್ನು ಮುಖ್ಯವಾಗಿ ತಿಳಿಸುತ್ತಾರೆ.

ಚೇತನನು ಆಚಾರ್ಯರದ್ವಾರ ಆ ಭಗವಂತನಿಗೆ ಶರೀರವೆಂಬ ಅರಿವು ಹೊಂದಬೇಕಾದುದು ಪ್ರಧಾನವಾದ ಉದ್ದೇಶ, ಇದೇ ನಿತ್ಯಸಂಬಂಧ. ಅಮುದನಾರ್‌ರವರು ಮೂಂಗಿಲ್‌ಕುಡಿ ಅಮುದನ್ ಆಗಿ ಪ್ರಾಕೃತ ಸಂಬಂಧ ಹೊಂದಿದ್ದವರು; ತಿರುವರಂಗತ್ತಮುದನಾರ್ ಆಗಿ ನಿತ್ಯಸಂಬಂಧ *(Spiritual association)* ಹೊಂದಿ ಪರಮಭಾಗವತರಾದರು. ಇದೇ ಅವರ ಈ ಕೃತಿಯು 'ತದೀಯವೈಭವ' ವಾಗಲು ಕಾರಣವಾಗಿ 'ಪ್ರಪನ್ನ ಗಾಯತ್ರಿ' ಆಗಿದೆ.

ಭಗವದ್ಗೀತೆಯ ಚರಮಶ್ಲೋಕದಲ್ಲಿ ಶ್ರೀ ಕೃಷ್ಣನು ಚೇತನರಿಗೆ ತಾನು ರಕ್ಷಿಸುವುದಾಗಿ ಭರವಸೆನೀಡಿ ಭಯಪಡುವ ಆವಶ್ಯಕವಿಲ್ಲ ಎಂದು ತಿಳಿಸುತ್ತಾನೆ. ಆದರೆ ನಾಲ್ಕುಸಾವಿರ ದಿವ್ಯ ಪ್ರಬಂಧಕ್ಕೆ ಚರಮಶ್ಲೋಕವಾಗಿರುವ ಪ್ರಪನ್ನ ಗಾಯತ್ರಿಯು ರಕ್ಷಣೆಗಾಗಿ ಭಕ್ತಿಯಿಂದ ಪ್ರೇರಿತವಾದ ಪ್ರಾರ್ಥನೆಯಾಗಿದೆ.

ಚೇತನನಿಗೆ ಅತ್ಯಂತ ಅವಶ್ಯಕವಾದ ತತ್ತ್ವಾಂಶಗಳನ್ನು ಅಳವಡಿಸಿ ಅಮುದನಾರ್‌ರವರು ಶ್ರೀರಾಮಾನುಜಾಚಾರ್ಯರ ಸಮಕಾಲೀನರಾಗಿ ಅವರ ವೈಭವವನ್ನು ಕೃತಿಯಲ್ಲಿ ಪ್ರದರ್ಶಿಸಿದುದು ಒಂದು ವಿಶೇಷಕೃಪೆ. ನೂರೆಂಟು ಪಾಶುರಗಳನ್ನು ಪ್ರತಿದಿನವೂ ಒಂದುಸಲ ಪಠಿಸಿದರೆ, ಅವತಾರ ಪುರುಷರಾದ ಶ್ರೀರಾಮಾನುಜರ ತಿರುನಾಮವನ್ನು ನೂರೆಂಟಾವರ್ತಿ ಜಪಿಸಿದಫಲದಿಂದಾಗಿ ಈ ಪ್ರಾಕೃತಸಂಬಂಧವಾದ ಲೀಲಾವಿಭೂತಿಯಿಂದ ಬಿಡುಗಡೆಹೊಂದಿ ಪರಮಪದದ ಅನುಭವವುಂಟಾಗುವುದರಲ್ಲಿ ಸಂಶಯವಿಲ್ಲ ಎಂದು ತಿಳಿಸುವರು.

'ಕೈಂಕರ್ಯ' ಎಂಬ ಪರಮಾತ್ಮನ ಸೇವೆಯ ಪದಕ್ಕೆ ಮತ್ತೊಂದು ಪದ ಇರುವುದಾದರೆ ಅದೇ 'ರಾಮಾನುಜ'. ಪರಮಪದದಲ್ಲಿ ಶೇಷಶಾಯಿಯಾಗಿ, ರಾಮಾವತಾರದಲ್ಲಿ ಲಕ್ಷ್ಮಣನಾಗಿ, ಕೃಷ್ಣಾವತಾರದಲ್ಲಿ ಬಲರಾಮನಾಗಿ, ಕಲಿಯುಗದಲ್ಲಿ ಶ್ರೀರಾಮಾನುಜರಾಗಿ ಮತ್ತು ಮಣವಾಳ ಮಾಮುನಿಗಳಾಗಿ, ಎಲ್ಲಾ ಅವತಾರಗಳಲ್ಲಿಯೂ ಪರಮಾತ್ಮನಿಗೆ ಸೇವೆಸಲ್ಲಿಸಿ 'ಶೇಷತ್ವೇ ಸತಿ ಜ್ಞಾತೃತ್ವಂ' ಎಂಬ ಉತ್ತಮೋತ್ತಮ ಉಕ್ತಿಯನ್ನು ಸಾರಿ, ತಾವು ಅನುಷ್ಠಾನದಲ್ಲಿ ತೋರಿಸಿದ ಮಹಾವ್ಯಕ್ತಿ, ಇಹಲೋಕದಲ್ಲಿ ಚೇತನನ ಉಜ್ಜೀವನದ ಮಾರ್ಗದರ್ಶಕರಾಗಿ, ಸಮಾಜ ಸೇವೆಯ ಉದ್ದೇಶವನ್ನು ಹನ್ನೊಂದನೇ ಶತಮಾನದಲ್ಲೇ ಬೆಳಕಿಗೆತಂದ ಪುಣ್ಯಪುರುಷರು

ಪ್ರಪನ್ನ ಗಾಯತ್ರಿಯು–ಆಚಾರ್ಯರ ವೈಭವ. ಅವರ ಅಂತರಂಗ ಶಿಷ್ಯರಾದ ಕೂರೇಶರ ಅನುಭವದ ಮೂಲಕ ಪ್ರದರ್ಶಿಸಲ್ಪಟ್ಟು, ಅಮುದನಾರ್ ತಮ್ಮ ಕೃತಿಯಲ್ಲಿ ಚೇತನವರ್ಗದ ಅರಿವಿಗೆ ಪ್ರಕಾಶಪಡಿಸಲಾಗಿದೆ. ಪ್ರಪನ್ನ ಗಾಯತ್ರಿಯಲ್ಲಿ ಉಜ್ಜೀವನಕ್ಕಾಗಿ ಸ್ವಪ್ರಯತ್ನದಲ್ಲಿ ತೊಡಗಿದ ಮಹನೀಯರ ಸುಳಿವೇ ಕಂಡುಬರುವುದಿಲ್ಲ. ಪ್ರಯತ್ನದಫಲ ಚೈತನ್ಯದಫಲವಾಗಿ ಏರ್ಪಟ್ಟು, ತತ್–ತದೀಯರ ಸೇವೆಗಾಗಿ ಮೀಸಲಾಗಿರುವುದು ಅದರಲ್ಲೂ ಚೇತನನು ಸ್ವತಂತ್ರನಲ್ಲದೆ, ಪರಮಾತ್ಮನ ಶರೀರನಾಗಿ ಅವನ ವ್ಯಾಪಾರದಲ್ಲಿ ಬಳಕೆಗಾಗಿ ಏರ್ಪಟ್ಟಿರುವವಸ್ತು ಎಂಬುದಾಗಿ ಭಾವಿಸಿ ಅಚೇತನದಂತೆ ತಾಟಸ್ಥ್ಯವನ್ನು ಸಹಿಸಲಾರದ ವ್ಯಕ್ತಿವಿಶೇಷವೆಂಬ ಭಾವನೆಯೇ ಚೇತನೇಶ್ವರ ಸಂಬಂಧದ ಶರೀರಾತ್ಮ ಭಾವನೆಯನ್ನು ಉರ್ಜಿತಪಡಿಸುತ್ತದೆ, ಎಂದು ಮನಗಾಣಬೇಕಾಗುತ್ತದೆ.

ಶ್ರೀಮತೇ ರಾಮಾನುಜಾಯನಮಃ

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

–ತಿ. ತಿ. ದೇ.

# ತಿ.ತಿ.ದೇ. ಧರ್ಮಕರ್ತರ ಮಂಡಳಿಯ ತೀರ್ಮಾನಗಳು 23-2-1988

ತುಪ್ಪ ಬೇಳೆ, ಮೊದಲಾದವುಗಳ ಏರುತ್ತಿರುವ ಬೆಲೆಗಳ ದೃಷ್ಟ್ಯಾ, ತಿರುಮಲೆಯ ಸ್ವಾಮಿ ಪ್ರಸಾದವಾದ ಲಾಡುವಿನ ಬೆಲೆಯನ್ನು ಈಗಿರುವ ಮೂರುರೂಗಳಿಂದ ನಾಲ್ಕು ರೂಗಳಿಗೂ, ಕಲ್ಯಾಣೋತ್ಸವದ ಲಾಡು ಬೆಲೆಯನ್ನು ಹನ್ನೆರಡುರೂಗಳಿಂದ ಹದಿನಾರು ರೂಗಳಿಗೂ ಏರಿಸಿ, 1–3–88 ರಿಂದ ಜಾರಿಗೆ ತರಲು ನಿರ್ಣಯಿಸಲಾಯಿತು.

*   *   *   *

ಶ್ರೀನಿವಾಸ ಮಂಗಾಪುರದ ಶ್ರೀಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಐದುರೂಗಳ ವಿಶೇಷ ಪ್ರವೇಶದ ಟಿಕೆಟ್‌ಗಳನ್ನು ಪ್ರವೇಶ ಪಡಿಸಲು ತೀರ್ಮಾನಿಸಲಾಯಿತು.

*   *   *   *

ಸಂಸ್ಕೃತ ಭಾಗವತದ ಪುನಃ ಸಂಶೋಧಿತ ಪ್ರಕಟನೆಗಾಗಿ ತಿ. ತಿ. ದೇ. ಗಳಲ್ಲಿ ಉಂಟಾಗಿದ್ದ ಭಾಗವತಂ ಪ್ರಾಜೆಕ್ಟ್‌ನ ನಿರ್ದೇಶಕರಾಗಿದ್ದ ಡಾ॥ ಪಿ ರಾಧಾಕೃಷ್ಣ ಶರ್ಮರು ತಮ್ಮ ಮೂಲ ಸ್ಥಳಕ್ಕೆ ಹಿಂದಿರುಗಿದ್ದರಿಂದಾಗಿ ಅವರ ಸ್ಥಳದಲ್ಲಿ ವಿದ್ವಾಂಸರಾದ ಶ್ರೀ ಎನ್ ಸಿ. ವಿ. ನರಸಿಂಹಾಚಾರ್ಯರನ್ನು ನಿರ್ದೇಶಕರನ್ನಾಗಿ ನಿಯಮಿಸಬೇಕೆಂದೂ, ಅವರಿಗೆ ಒಟ್ಟು 30, 000 ರೂಗಳ ಗೌರವಧನವನ್ನು (ಎರಡು ವರ್ಷದಲ್ಲಿ ಇಡೀ ಕೆಲಸವನ್ನು ಮುಗಿಸಬೇಕೆಂದೂ ತಿಳಿಸುತ್ತ) ನೀಡಬೇಕೆಂದೂ ಇಡೀ ಯೋಜನೆಯಲ್ಲಿ 42,000 ರೂಗಳ ವೆಚ್ಚವನ್ನು ಮೀರದಂತೆ ಇಬ್ಬರು ಸಂಶೋಧನ ಸಹಾಯಕರನ್ನು ನೇಮಿಸಿ ಕೊಳ್ಳಲು ಅವರಿಗೆ ಅವಕಾಶ ನೀಡಬೇಕೆಂದೂ ತೀರ್ಮಾನಿಸಲಾಯಿತು.

*   *   *   *

ನವದೆಹಲಿಯ ತಿ. ತಿ. ದೇ ವಿಚಾರಣಾಕೇಂದ್ರದಲ್ಲಿ ನಿತ್ಯಪೂಜೆಗಾಗಿ ದಿತ್ತವನ್ನು ನಿರ್ಣಯಿಸಲಾಯಿತು.

*   *   *   *

ತಿ. ತಿ. ದೇ. ಗಳ ಆಡಳಿತದಲ್ಲಿ ನಡೆಯುತ್ತಿರುವ ಶಾಲೆಗಳ ವಿದ್ಯಾರ್ಥಿಗಳಿಗಾಗಿ ಉಚಿತ ದಂತ ಚಿಕಿತ್ಸಾ ಹಾಗೂ ಸಾಮಾನ್ಯ ಆರೋಗ್ಯ ತಪಾಸಣಾ ಶಿಬಿರವನ್ನು ನಡೆಸಬೇಕೆಂದು ತೀರ್ಮಾನಿಸಲಾಯಿತು.

*   *   *   *

ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿ ದೇವಾಲಯದ ಮುಕುರ ಮಂಟಪದಲ್ಲಿ ದೇವರ ಊಂಜಲ್ ಸೇವೆಗಾಗಿ ಉಚಿತವಾಗಿ ಹೊಸದಾಗಿ ಕನ್ನಡಿಗಳ ಅಲಂಕಾರವನ್ನು ಏರ್ಪಡಿಸಿದ ಮದ್ರಾಸಿನ ಶ್ರೀಗ್ಲೋಬ್' ಕೈಗಾರಿಕೆ ಅವರನ್ನು ಸ್ವಾಮಿ ಶೇಷವಸ್ತ್ರ ಹಾಗೂ ಐದುಗ್ರಾಂಗಳ ಸ್ವಾಮಿಯ ಬಂಗಾರದ ಪದಕದೊಂದಿಗೆ ಸನ್ಮಾನಿಸಬೇಕೆಂದೂ, ಅವರು ನೀಡಿರುವ ಕನ್ನಡಿಗಳ ತಾಂತ್ರಿಕ ದೋಷಗಳ ತಪಾಸಣೆಗಾಗಿ ಕನ್ನಡಿ ಮಹಲಿನಲ್ಲಿ ಉತ್ಸವ ಮೂರ್ತಿಗಳಿಲ್ಲದೆ ಸ್ಥಿರ ಚಿತ್ರಗಳನ್ನು ತೆಗೆದು ಕೊಳ್ಳಲು ಅವಕಾಶ ನೀಡಬೇಕೆಂದೂ ತೀರ್ಮಾನಿಸಲಾಯಿತು.

*   *   *   *

ತಿ. ತಿ. ದೇಗಳ ಕಾಮಗಾರಿ ಇಲಾಖೆಯ ಕೆಲಸಗಳಿಗಾಗಿ ಪೂರ್ವಾರ್ಹ ಕಂಟ್ರಾಕ್ಟ್‌ದಾರರ ಅರ್ಜಿಗಳನ್ನು ಪರಿಶೀಲಿಸಲು ತಜ್ಞ ಸಮಿತಿಯನ್ನು ಕೆಳಕಂಡ ಅಧಿಕಾರಿಗಳೊಂದಿಗೆ ನೇಮಿಸಲು ತೀರ್ಮಾನಿಸಲಾಯಿತು.

1. ನೀರಾವರಿ ಮುಖ್ಯ ಇಂಜನೀಯರ್ (ಆಂ.ಪ್ರ.)
2. ವಲ್ಲಮತಂ ಮುಖ್ಯ ಇಂಜನೀಯರ್ (ಆಂ. ಪ್ರ.)
3. ರಹದಾರಿ ಮತ್ತು ಭವನಗಳ ಮುಖ್ಯ ಇಂಜನೀಯರ್ (ರಸ್ತೆ, ಆಂ.ಪ್ರ.)
4. ರಹದಾರಿ ಮತ್ತು ಭವನಗಳ ಮುಖ್ಯ ಇಂಜನೀಯರ್ (ಭವನಗಳು ಆಂ. ಪ್ರ.)
5 ಮುಖ್ಯ ಇಂಜನೀಯರ್ ತಿ. ತಿ. ದೇ.

*   *   *   *

ತೆನಾಲಿಯಲ್ಲಿ 17. 5 ಲಕ್ಷಗಳ ಅಂದಾಜು ವೆಚ್ಚದಲ್ಲಿ ತಿ. ತಿ. ದೇ ಕಲ್ಯಾಣ ಮಂಟಪವನ್ನು ನಿರ್ಮಿಸಲು ಆಡಳಿತಾತ್ಮಕ ಪರವಾನಗಿ ನೀಡಲು ತೀರ್ಮಾನಿಸಲಾಯಿತು.

*   *   *   *

ಟಂಗಟೂರಿನಲ್ಲಿ 8 ಲಕ್ಷರೂಗಳ ಅಂದಾಜು ವೆಚ್ಚದಲ್ಲಿ ತಿ ತಿ. ದೇ. ಕಲ್ಯಾಣ ಮಂಟಪ ನಿರ್ಮಿಸಲು ಆಡಳಿತಾತ್ಮಕ ಪರವಾನಗಿ ನೀಡಲು ತೀರ್ಮಾನಿಸಲಾಯಿತು.

*   *   *   *

ವರಂಗಲ್ ನ ಬಧಿರ ಪಾಠಶಾಲೆಯನ್ನು ತಿ. ತಿ. ದೇ. ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಕೊಳ್ಳಲು ಸರಕಾರ ಅನುಮತಿ ನೀಡಿದೆ. ಈ ಶಾಲೆಯನ್ನು ತಿರುಪತಿ ಹಾಗೂ ಭೀಮವರಂ ಗಳಲ್ಲಿ ಈಗಾಗಲೇ ತಿ. ತಿ. ದೇ. ನಡೆಸುತ್ತಿರುವ ಇಂತಹ ಶಾಲೆಗಳ ಮಟ್ಟಕ್ಕೆ ಏರಿಸಲು ತಕ್ಕಂತೆ, ಅಧ್ಯಾಪಕರು ಹಾಗೂ ಇತರ ಸಿಬ್ಬಂದಿ ವರ್ಗವನ್ನೂ ನೇಮಿಸಲು ತೀರ್ಮಾನಿಸಿ, ಶಾಲೆಯ ಹೊಸಕಟ್ಟಡಕ್ಕೆ ಆಂಧ್ರ ಪ್ರದೇಶದ ಸಾಮಾಜಿಕ ಅಭಿವೃದ್ಧಿ ಇಲಾಖೆಯೊಡನೆ 50, 50 ಶತಾಂಶ ವಂತಿಗೆಯ ಆಧಾರದಲ್ಲಿ 7 ಲಕ್ಷರೂಗಳ ಮಂಜೂರು ಮಾಡಿ ತಿ. ತಿ. ದೇ ಮುಖ್ಯ ಇಂಜನೀಯರ್ ಅವರನ್ನು ಶಾಲಾ ಕಟ್ಟಡದ ನೀಲಿನಕಾಶೆಯನ್ನು ಸಿದ್ಧಪಡಿಸಲು ಕೇಳಲು ತೀರ್ಮಾನಿಸಲಾಯಿತು

*   *   *   *

1–3–88 ರಿಂದ ಜಾರಿಗೆ ಬರುವಂತೆ ತಿ. ತಿ. ದೇ. ಕ್ಯಾಂಟೀನ್‌ಗಳಲ್ಲಿ ಊಟೋಪಚಾರಗಳ ಬೆಲೆಗಳನ್ನು ತುಸು ಹೆಚ್ಚಿಸಲು ತೀರ್ಮಾನಿಸಲಾಯಿತು.

*   *   *   *

ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಯ ಸಲಹಾ ಸಮಿತಿಯಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರು ಅಧ್ಯಕ್ಷರಾಗಿಯೂ, ಧರ್ಮಕರ್ತರ ಮಂಡಳಿಯ ಶ್ರೀ ಬಿ. ರಾಮಚಂದ್ರ ರಾಜು ಹಾಗೂ ಶ್ರೀಮತಿ ವರದ ಸರೋಜ ಅವರುಗಳು ಸದಸ್ಯರಾಗಿಯೂ, ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ (ಸ್ವಾಗತ) ಅವರು ಕಾರ್ಯದರ್ಶಿಯಾಗಿಯೂ, ಇರಬೇಕೆಂದೂ, ಸಮಿತಿಯು ಮೂರು ತಿಂಗಳಿಗೊಮ್ಮೆ ಸಭೆ ಸೇರಬೇಕೆಂದೂ ಈ ಸಭೆಯಲ್ಲಿ ದಾನಿಗಳು ತಮ್ಮ ಸಲಹೆಗಳನ್ನು ನೀಡಲು ಅನುಕೂಲವಾಗುವಂತೆ ಅವರಿಗೆ ಸಭೆಯ ದಿನ ಸ್ಥಳಗಳನ್ನು ತಿಳಿಸಬೇಕೆಂದೂ ತೀರ್ಮಾನಿಸಲಾಯಿತು.

*   *   *   *

ತಿ. ತಿ. ದೇ ಗಳ ಧಾರ್ಮಿಕ ಗ್ರಂಥ ಪ್ರಕಟನ ಸಹಾಯ ಯೋಜನೆಯ ತಜ್ಞ ಸಮಿತಿಗೆ ವರಂಗಲ್‌ನ ಡಾ॥ ಎಸ್. ಪಿ. ಲಕ್ಷ್ಮಣ ಮೂರ್ತಿ (ಆಂಗ್ಲ ಭಾಷೆ) ಹಾಗೂ ಪ್ರೊ॥ ಭೀಮಸೇನ ನಿರ್ಮಲ್ (ಹಿಂದಿ ಭಾಷೆ) ಅವರುಗಳನ್ನು ತಜ್ಞರನ್ನಾಗಿ ಪಡೆದುಕೊಂಡು ಧಾರ್ಮಿಕ ಗ್ರಂಥ ಪ್ರಕಟನಾ ಸಹಾಯ ಯೋಜನೆ ಹಾಗೂ ತಿ. ತಿ. ದೇ ಪ್ರಕಟನಾ ವಿಭಾಗದ ಪುಸ್ತಕಗಳ ಆಯ್ಕೆಗಾಗಿ ಕೆಲವು ನಿರ್ದೇಶಕ ತತ್ತ್ವಗಳನ್ನು ಅಂಗೀಕರಿಸಲಾಯಿತು. ಈ ಸಂದರ್ಭದಲ್ಲಿಯೇ ನೆರವು ನೀಡಿಕೆಯನ್ನು 10,000 ರೂಗಳಿಗೆ ಏರಿಸುವ ತೀರ್ಮಾನವನ್ನೂ ಕೈಗೊಳ್ಳಲಾಯಿತು.

*   *   *   *

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ ಎ ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೇ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗೆ ಅನ್ನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಒಳಶಕ್ತಿಯ ಜೀವಸತ್ತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,

**(ಸಿ. ಎಚ್. ವೆಂಕಟಪತಿರಾಜು)**

ತಿರುಪತಿಯ ಶ್ರೀ ಪದ್ಮಾವತೀ ಕಾಲೇಜಿನ ಬಳಿಯ ಶ್ರೀ ಪದ್ಮಾವತಿ ಅತಿಥಿಗೃಹದಲ್ಲಿ ಎರಡನೇ ಅಂತಸ್ತನ್ನು ವಿಸ್ತೃತಗೊಳಿಸಿ, 3ನೇ ಅಂತಸ್ತಿನಲ್ಲಿ ಹೊಸದಾಗಿ ಇನ್ನೂ ಹಲವು ಕೋಣೆಗಳನ್ನು ನಿರ್ಮಿಸಲು 17. 5 ಲಕ್ಷರೂಗಳ ಅಂದಾಜು ವೆಚ್ಚವನ್ನು ಒಪ್ಪಲಾಯಿತು

* * * *

ಕೂಚಿಪುಡಿ ಆರ್ಟ್ಸ್ ಅಕಾಡಮಿಯವರು ತಿ. ತಿ. ದೇ. ಗಳ ಆಯ್ಕೆಯ 12 ಸ್ಥಳಗಳಲ್ಲಿ ಶ್ರೀನಿವಾಸ ಕಲ್ಯಾಣ–ನೃತ್ಯರೂಪಕ ಪ್ರದರ್ಶನ ನಡೆಸಲು ಒಟ್ಟು 5 ಲಕ್ಷರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು

## ದಿನಾಂಕ 19-3-88

ಶ್ರೀ ಕಾಳಹಸ್ತಿಯಲ್ಲಿನ ತಿ ತಿ. ದೇ ಕಲ್ಯಾಣ ಮಂಟಪ ಸತ್ರಗಳಲ್ಲಿನ ಕೊಠಡಿಗಳ ದಿನಂಪ್ರತಿ ಬಾಡಿಗೆಯನ್ನು ರೂ 8 ರಿಂದರೂ 15 ಕ್ಕೆ ಏರಿಸಲು ತೀರ್ಮಾನಿಸಲಾಯಿತು.

* * *

ತಿ ತಿ ದೇ. ಗಳಲ್ಲಿ ಕೆಲಸ ಮಾಡುವ ಉದ್ಯೋಗಿಗಳಿಗೆ ರಾತ್ರಿ–10 ರಿಂದ ಬೆಳಗ್ಗೆ 6 ಗಂಟೆಯವರೆಗೆ ಕೆಲಸಮಾಡುವಾಗ ರೂ 2/– ರಾತ್ರಿ ಕೆಲಸದ ಭತ್ಯ ನೀಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ವೇದ ಪಾರಾಯಣಯೋಜನೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವವರ ಸಂಭಾವನೆಯನ್ನು ಹೆಚ್ಚಿಸಲು ತೀರ್ಮಾನಿಸಲಾಯಿತು.

* * * *

ಅನ್ನಮಾಚಾರ್ಯ ಪ್ರಾಜೆಕ್ಟ್‌ನ ವತಿಯಿಂದ ಏರ್ಪಾಡಾಗುವ ಕಾರ್ಯಕ್ರಮಗಳಲ್ಲಿನ ಹೊರಗಿನ ಪಕ್ಕವಾದ್ಯಗಾರರಿಗೆ 100 ರೂಗಳ ಸಂಭಾವನೆ ನೀಡುವ ಕ್ರಮವನ್ನು ಮತ್ತೆ ಒಂದು ವರ್ಷಕಾಲ ಮುಂದುವರೆಸಲು ತೀರ್ಮಾನಿಸಲಾಯಿತು.

* * * *

ಅನ್ನಮಾಚಾರ್ಯ ಸಂಕೀರ್ತನಗಳಲ್ಲಿ ಜಾನಪದ ಸೊಗಡಿರುವ ಕೀರ್ತನಗಳ ಪ್ರಚಾರವನ್ನು ಚಿತ್ತೂರು ಜಿಲ್ಲೆಯ ವಿವಿಧಗ್ರಾಮಗಳಲ್ಲಿ ಒಂದು ವರ್ಷಕಾಲ ಪ್ರಾಯೋಗಿಕವಾಗಿ ನಡೆಸಿ ಪರಿಣಾಮವನ್ನು ಗಮನಿಸಲು ತೀರ್ಮಾನಿಸಲಾಯಿತು.

* * * *

ನರಸಿಂಗಾಪುರದಿಂದ ಕಳ್ಯಾಣಿ ಡ್ಯಾಂಗೆ ವರ್ಗಾವಣೆಯಾದ ಎಸ್. ವಿ ವೇದಪಾಠಶಾಲೆಯ ಅಧ್ಯಾಪಕ, ಸಿಬ್ಬಂದಿ ವರ್ಗಕ್ಕೆ ಅಲ್ಲಿಯೇ ಇರುವ ಮನೆಗಳನ್ನು ಬಾಡಿಗೆ ರಹಿತವಾಗಿ ವಾಸಕ್ಕೆ ನೀಡಿ ಪ್ರೋತ್ಸಾಹಿಸಲು ತೀರ್ಮಾನಿಸಲಾಯಿತು.

# ವಾರ್ತಾಲಹರಿ

## ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು

15-9-88 ರಿಂದ 21-3-88 ವರೆಗೆ ಒಂದು ವಾರಕಾಲ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್ ವತಿಯಿಂದ ತಾಳ್ಲಪಾಕ ಅನ್ನಮಾಚಾರ್ಯರ 485ನೇ ವರ್ಧಂತಿ ಉತ್ಸವಗಳು ಘನವಾಗಿ ನಡೆದವು.

15 ನೇ ತಾರೀಖು ಬೆಳಗ್ಗೆ ಅನ್ನಮಾಚಾರ್ಯರ ಪ್ರತಿಮೆಯ ಊರಮೆರವಣಿಗೆ ತಿ.ತಿ ದೇ ಪರಿಪಾಲನಾಭವನದಿಂದ ಶ್ರೀ ಕೋದಂಡರಾಮಸ್ವಾಮಿ ದೇವಾಲಯದ ಮೂಲಕ ಅನ್ನಮಾ-ಚಾರ್ಯ ಮಂದಿರವನ್ನು ತಲುಪಿದ ಮೇಲೆ, ಶ್ರೀ ಕೋದಂಡರಾಮಸ್ವಾಮಿ ದೇವಾಲಯದ ಉತ್ಸವ ಮೂರ್ತಿಗಳನ್ನು ಸಭಾಸ್ಥಲಕ್ಕೆ ಬಿಜಯ ಮಾಡಿಸಲಾಯಿತು. ಪ್ರಾಜೆಕ್ಟ್ ಕಲಾವಿದರ ಸಮೂಹ ಗಾಯನದ ನಂತರ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ ಎಚ್ ವೆಂಕಟಪತಿರಾಜು ಅವರ ಅಧ್ಯಕ್ಷತೆಯಲ್ಲಿ ಮುಖ್ಯ ಅತಿಥಿಯಾಗಿ ಶ್ರೀ ಪದ್ಮಾವತಿ ಮಹಿಳಾ ವಿ ವಿ ಯ ಉಪಕುಲಪತಿ ಡಾ॥ ಕೆ ರಾಜ್ಯಲಕ್ಷ್ಮಿ ಅವರು ಅನ್ನಮಾಚಾರ್ಯರ ಬಗ್ಗೆ ಮಾತನಾಡಿದರು. ಶ್ರೀ ವೆಂಕಟಪತಿ ರಾಜು ಅವರು ತಾಳ್ಲಪಾಕ ವಂಶದವರನ್ನು ಸತ್ಕರಿಸಿದರು. ಪ್ರಾಜೆಕ್ಟ್ ಕಲಾವಿದರಿಂದ ದಿನಮು-ದ್ವಾದಶಿ ನೇಡು-ಅದ ನಂತರ ಶ್ರೀ ಸಿಂಗರಾಜು ಸಚ್ಚಿದಾನಂದ ಅವರು ಅನ್ನಮಾಚಾರ್ಯ ಕಿರ್ತನೆಗಳ ತಾಮ್ರಪಟಗಳ ಸಂಗ್ರಹಣೆ ಸಂಶೋಧನೆಯಲ್ಲಿ ಶ್ರೀ ವೇಟೂರಿ ಪ್ರಭಾಕರಶಾಸ್ತ್ರಿ ಅವರ ಶ್ರಮವನ್ನು ವಿವರಿಸಿದರು.

ಎಸ್. ಕೆ. ಜಯಚಂದ್ರ (ತಿ ತಿ ದೇ. ಭದ್ರತಾ ಅಧಿಕಾರಿ) ಅವರು ಸ್ವಾಗತಿಸಿದ ಸಭೆಯಲ್ಲಿ ಪ್ರಾಜೆಕ್ಟ್ ಅಧಿಕಾರಿ ಶ್ರೀಮೇಡಸಾನಿ ಮೋಹನ್ ಅವರು ವರದಿಯನ್ನು ಓದಿದರು

ಅಂದು ಸಂಜೆ ಶ್ರೀಮತಿ ಪಿ ಲೀಲಾವತಿ; ಶ್ರೀ ಜಿ. ನಾಗೇಶ್ವರರಾವು ನಾಯುಡು, ಶ್ರೀ ಜಿ. ಪಶುಪತಿ ಅವರುಗಳು ಅನ್ನಮಾಚಾರ್ಯ ಸಂಕೀರ್ತನ ಸಭೆಯನ್ನು ನಡೆಸಿಕೊಟ್ಟರು.

ಮುಂದಿನ ದಿನಗಳಲ್ಲಿನ ಕಾರ್ಯಕ್ರಮಗಳಲ್ಲಿ ಸರ್ವಶ್ರೀ ಸಿ. ದಾಮೋದರಶಾಸ್ತ್ರಿ, ಆಚಾರ್ಯ ಶಲಾಕ ರಘುನಾಥ ಶರ್ಮ, ಆಚಾರ್ಯ ತಮ್ಮಾರೆಡ್ಡಿ ನಿರ್ಮಲ, ನಾಗಳ್ಳ ಗುರುಪ್ರಸಾದರಾವು, ಡಾ॥ ಕೆ. ಸರ್ವೋತ್ತಮರಾವು, ಕೆ. ವೆಂಕಟಶಿವಯ್ಯ, ಜಿ ಬಾಲಕೃಷ್ಣಪ್ರಸಾದ್ ಎಸ್. ಲಕ್ಷ್ಮಣಯ್ಯ, ಎಂ. ಭಾಸ್ಕರನಾಯುಡು, ಡಾ॥ ಜೆ. ಬಾಪುರೆಡ್ಡಿ ಮೊದಲಾದ ಉದ್ದಾಮ ಪಂಡಿತರು ಉಪನ್ಯಾಸಗಳನ್ನು ನೀಡಿದರು ಶ್ರೀಮತಿಯರಾದ ವೇದವತೀ ಪ್ರಭಾಕರರಾವು, ಜಯಾಪಶುಪತಿ, ಸರ್ವಶ್ರೀ ಪಿ. ಸೂರ್ಯರಾವು, ಎಂ. ವಿ ರಮಣಮೂರ್ತಿ, ಜಿ ಬಾಲಕೃಷ್ಣಪ್ರಸಾದ್, ಪುದುಕ್ಕೋಟ್ಟೈ ಆರ್. ರಾಮನಾಥನ್ ಪಿ. ಎಸ್. ರಂಗನಾಥ್, ಜಿ. ನಾಗೇಶ್ವರರಾವ್ ನಾಯುಡು, ಆನಂದಭಟ್ಟರ್, ಜಿ ಬಾಲಕೃಷ್ಣಪ್ರಸಾದ್ ಮೊದಲಾದವರು ಸಂಗೀತ ಕಚೇರಿಗಳನ್ನು ನೀಡಿದರು.

24 ರಂದು ಸೋಮವಾರ ಬೆಳಗ್ಗೆ, ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಉತ್ಸವ ಮೂರ್ತಿಗಳನ್ನು ಮೆರವಣಿಗೆಯಲ್ಲಿ ಸಭಾಸ್ಥಲಕ್ಕೆ ಬಿಜಯಗ್ಯೆಸಲಾಯಿತು. ಡಾ॥ ಜೆ. ಬಾಪುರೆಡ್ಡಿಯವರು ಅನ್ನಮಾಚಾರ್ಯರ ಕರ್ಮಯೋಗ, ಭಕ್ತಿಯೋಗಗಳನ್ನು ವಿವರಿಸಿದರು.

ಅಂದು ಸಂಜೆ ಶ್ರೀ ಸಿ ಎಚ್ ವೆಂಕಟಪತಿ ರಾಜು ಅವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ. ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಸದಸ್ಯ ಶ್ರೀ ಐ ಎಲ್. ಎನ್. ಶಾಸ್ತ್ರಿಯವರು; ಶ್ರೀ ಓಲೇಟಿ ವೆಂಕಟೇಶ್ವರ್ಲು, ಶ್ರೀಮತಿ ವಾಣಿ ಜಯರಾಂ ಅವರುಗಳ ಗಾಯನದ ಎರಡು ಧ್ವನಿಸುರುಳಿಗಳನ್ನು ಬಿಡುಗಡೆ ಮಾಡಿದರು. ನಂತರ ಡಾ॥ ಜೆ. ಬಾಪುರೆಡ್ಡಿ ಅವರು ಅನ್ನಮಾಚಾರ್ಯರ ವೇದಾಂತವನ್ನು ವಿವರಿಸಿದರು ಅನಂತರ ಪ್ರಾಜೆಕ್ಟ್ ಕಲಾವಿದರು ಶ್ರೀ ಪಿ. ಎಸ್ ರಂಗನಾಥ್ ಅವರ ಗಾತ್ರಕಚೇರಿ, ಶ್ರೀ ಮಲ್ಲಿಕ ವೃಂದದವರ ಗಾಯನ ಸಭೆನಡೆದವು. ಕೊನೆಯಲ್ಲಿ ಗಾಯಕ, ವಿದ್ವಾಂಸರನ್ನು ಸನ್ಮಾನಿಸಲಾಯಿತು. (ರಕ್ಷಾಪತ್ರದ ಒಳಗಡೆ 1 ರಲ್ಲಿ ಉತ್ಸವ, ಉಪನ್ಯಾಸ ಕಾರ್ಯಕ್ರಮಗಳ ಹಾಗೂ 2 ರಲ್ಲಿ ಉತ್ಸವದ ಸಂಗೀತಸಭೆಗಳ ಚಿತ್ರಗಳನ್ನು ಕಾಣಬಹುದು )

## ದಾಸ ಸಾಹಿತ್ಯ ಪ್ರಾಜೆಕ್ಟ್ ತಜ್ಞ ಸಲಹಾ ಸಮಿತಿ

ತಿ ತಿ. ದೇವಸ್ಥಾನಗಳ ದಾಸ ಸಾಹಿತ್ಯ ಪ್ರಾಜೆಕ್ಟಿನ ತಜ್ಞ ಸಲಹಾ ಸಮಿತಿಯನ್ನು ಹಿಂದಿನ ಸಲಹಾ ಸಮಿತಿಯ ಅವಧಿ ಮುಗಿದದ್ದರಿಂದ ಹೊಸದಾಗಿ ಆಯ್ಕೆ ಮಾಡಲಾಗಿದೆ. ಅದರಂತೆ ಕರ್ನಾಟಕ ಸರ್ಕಾರದ ಕನ್ನಡ ಸಂಸ್ಕೃತಿ ಇಲಾಖಾ ನಿರ್ದೇಶಕರು (ಶ್ರೀ ಐ. ಎಂ. ವಿಠಲಮೂರ್ತಿ) ಪದನಿಮಿತ್ತ ಸದಸ್ಯರಾಗಿಯೂ, ರಾಯಚೂರಿನ ಶ್ರೀ ಕೆ. ರಾಘವೇಂದ್ರರಾವ್, ಬೊಂಬಾಯಿನ ಶ್ರೀ ವಿದ್ಯಾಸಿಂಹಾಚಾರ್ಯ, (ಸತ್ಯಧ್ಯಾನ ವಿದ್ಯಾಪೀಠ) ಬೆಂಗಳೂರಿನ ಶ್ರೀ ಗೋವಿಂದ ಮೂರ್ತಿ ದೇಸಾಯಿ, ಶ್ರೀ ಆದ್ಯರಾಮಾಚಾರ್ಯ, ಶ್ರೀ ಎಂ ಎ. ಜಯರಾಮರಾವ್, ಶಹಾಬಾದ್‌ನ ಶ್ರೀ ಪ್ರೊ॥ ವಸಂತಕುಷ್ಟಗಿ ಅವರುಗಳು ಈ ಸಲಹಾಸಮಿತಿಯ ತಜ್ಞ ಸದಸ್ಯರಾಗಿರುವರು ಎಂದು ವರದಿಯಾಗಿದೆ



ಮುಂದಿನ ಸಂಚಿಕೆಯಲ್ಲಿ .... ....

## ಸಪ್ತಗಿರಿ. — ಮೇ 1988

**ಭೀಷ್ಮ-ಹನುಮಂತ**
– ವಿದ್ವಾನ್ ಬ. ನ. ಗುಂಡೂರಾವ್

**ಮಹಾರಾಷ್ಟ್ರದಲ್ಲಿ ಶ್ರೀವೆಂಕಟೇಶ್ವರಸ್ವಾಮಿ**
– ಆದ್ಯರಾಮಾಚಾರ್ಯ

**ಯಂತ್ರೋದ್ಧಾರಕ ಪ್ರಾಣದೇವರು**
– ವಾಣಿ ವಿ. ಕುಲಕರ್ಣಿ

**ತತ್ತ್ವಶುದ್ಧಿ**
– ರಘುಸುತ

**ಪತಿದಾನಕೊಟ್ಟಹಾಡು**
– ಎಸ್. ಪುಷ್ಪ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ : ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು ಬರೆಯಿರಿ – ಸಂಪಾದಕರು
ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಮೇ 1988

| | | |
|---|---|---|
| 1. | ಭಾನುವಾರ | ಶ್ರೀ ಕೂರ್ಮ ಜಯಂತಿ |
| 4. | ಬುಧವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವದ ಗರುಡೋತ್ಸವ |
| 7. | ಶನಿವಾರ | ,, ,, ,, ರಥೋತ್ಸವ |
| 10. | ಮಂಗಳವಾರ | ತಿರುಪತಿ ಗಂಗಜಾತ್ರೆ ಆರಂಭ |
| 11. | ಬುಧವಾರ | ಹನುಮಜ್ಜಯಂತಿ |
| 17. | ಮಂಗಳವಾರ | ತಿರುಪತಿ ಗಂಗಜಾತ್ರೆ ಸಮಾಪ್ತಿ |
| 21. | ಶನಿವಾರ | ನಮ್ಮಾಳ್ವಾರ್ ಉತ್ಸವಾರಂಭ. |

## ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಮೇ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

116, 133, 151, 152, 155, 156, 202, 215, 233, 236, 238, 240, 354, 457, 462, 465, 490, 491, 494, 576, 811, 812, 885, 1027, 1071, 1485, 1486, 1487, 1490, 1491, 1496, ರಿಂದ 1514, 1534,

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ. ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

## ಋಗ್ವೇದ

ಮೂಲ–ತೆಲುಗು ವ್ಯಾಖ್ಯಾನ.

ನಾಲ್ಕು ಸಂಪುಟಗಳು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

Edited and Published on behalf of the T. T. Devasthanams by K. Subba Rao, M.A.. and Printed at

Regd. No. H/TRP/14

ವಾರ್ಷಿಕ ಚಂದಾ ರೂ. 12-00



# ಶ್ರೀ ವೇದನಾರಾಯಣಸ್ವಾಮಿ ದೇವಾಲಯ, ನಾಗಲಾಪುರಂ.

## ವಾರ್ಷಿಕ ಬ್ರಹ್ಮೋತ್ಸವಗಳು—29-4-88 ರಿಂದ 8-5-88 ವರೆಗೆ

## ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 29-4-88 | ಶುಕ್ರವಾರ | — | ಸೇನಾಪತಿ ಉತ್ಸವ, ಅಂಕುರಾರ್ಪಣೆ |
| 30-4-88 | ಶನಿವಾರ | ಧ್ವಜಾರೋಹಣ | ದೊಡ್ಡಶೇಷವಾಹನ |
| 1-5-88 | ಭಾನುವಾರ | ಚಿಕ್ಕಶೇಷವಾಹನ | ಹಂಸವಾಹನ |
| 2-5-88 | ಸೋಮವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 3-5-88 | ಮಂಗಳವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 4-5-88 | ಬುಧವಾರ | ಮೋಹಿನೀ ಅವತಾರ | ಗರುಡವಾಹನ |
| 5-5-88 | ಗುರುವಾರ | ಹನುಮದ್ವಾಹನ, ಸಂಜೆ–ವಸಂತೋತ್ಸವ | ಗಜವಾಹನ |
| 6-5-88 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 7-5-88 | ಶನಿವಾರ | ರಥೋತ್ಸವ | ಅಶ್ವವಾಹನ |
| 8-5-88 | ಭಾನುವಾರ | ಪಲ್ಲಕಿ ಉತ್ಸವ, ತೀರ್ಥವಾರಿ | ಧ್ವಜಾವರೋಹಣ |

ನೀವೂ ಬನ್ನಿ

ನಿಮ್ಮವರನ್ನೂ ಕರೆತನ್ನಿ

ತಿ.ತಿ.ದೇ.